CPMG / KA / BG-GPO/13/2003-2005

ಸುವರ್ಣ ಕರ್ನಾಟಕ - 2006



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೦ | ಬೆಂಗಳೂರು, ಗುರುವಾರ, ಅಕ್ಟೋಬರ್ ೨೦, ೨೦೦೫ (ಆಶ್ವಯುಜ ೨೮ ಶಕ ವರ್ಷ ೧೯೨೭) | ಸಂಚಿಕೆ ೪೧ |
| --- | --- | --- |

## ಭಾಗ - ೫

## ಸರ್ಕಾರದ ಮತ್ತು ಖಾಸಗಿ ಜಾಹೀರಾತುಗಳು, ಲೋಕಸೇವಾ ಆಯೋಗದ ಜಾಹೀರಾತುಗಳು, ನೇಮಕಾತಿ ಸಮಿತಿಗಳ ಜಾಹೀರಾತುಗಳು.

**ಪೊಲೀಸ್ ಇಲಾಖೆ**

**ಪೊಲೀಸ್ ಇನ್ಸ್‌ಪೆಕ್ಟರ್ ಜನರಲ್, ರಾಜ್ಯ ಗುಪ್ತವಾರ್ತೆ**

**ಪರಿಶಿಷ್ಟ ಪಂಗಡಕ್ಕೆ ಮೀಸಲಾದ ಬ್ಯಾಕ್‌ಲಾಗ್ ಹುದ್ದೆಯ ಆಯ್ಕೆ ಪಟ್ಟಿ**

**ಸಂಖ್ಯೆ:ಎಸ್‌ಬಿಎ/ ಸಿಬ್ಬಂದಿ-2/ 109/ 2002-03, ದಿನಾಂಕ:28ನೇ ಸೆಪ್ಟೆಂಬರ್, 2005**

**ವಿಷಯ :** ರಾಜ್ಯ ಗುಪ್ತವಾರ್ತೆಯಲ್ಲಿ ಪರಿಶಿಷ್ಟ ಪಂಗಡಕ್ಕೆ ಮೀಸಲಾದ ಬ್ಯಾಕ್‌ಲಾಗ್ ಆಂಗ್ಲ ವರದಿಗಾರರ ಹುದ್ದೆಯನ್ನು ಭರ್ತಿ ಮಾಡುವ ಬಗ್ಗೆ.

**ಉಲ್ಲೇಖ :** ಕರ್ನಾಟಕ ರಾಜ್ಯ ಪತ್ರದ ಪ್ರಕಟಣೆ ದಿನಾಂಕ: 27.01.2005, ಎಡಿಜಿಪಿ, ಗುಪ್ತವಾರ್ತೆ, ಬೆಂಗಳೂರು ರವರ ಅಧಿಸೂಚನೆ ಸಂಖ್ಯೆ: 109/ ಸಿಬ್ಬಂದಿ-2/ 2002-03, ದಿನಾಂಕ: 31.01.2005.

| ಕ್ರ. ಸಂ. | ಹುದ್ದೆಯ ಹೆಸರು | ಒಟ್ಟು ಹುದ್ದೆ | ವರ್ಗೀಕರಣ | ಆಯ್ಕೆಗೊಂಡ ಅಭ್ಯರ್ಥಿ ಹೆಸರು | ವಿದ್ಯಾರ್ಹತೆಯಲ್ಲಿ ಪಡೆದ ಶೇಕಡ | ಹೆಚ್ಚುವರಿ ಪಟ್ಟಿಯಲ್ಲಿ ಆಯ್ಕೆಗೊಂಡ ಅಭ್ಯರ್ಥಿ ಹೆಸರು | ವಿದ್ಯಾರ್ಹತೆಯಲ್ಲಿ ಪಡೆದ ಶೇಕಡ |
| --- | --- | --- | --- | --- | --- | --- | --- |
| 1. | ಆಂಗ್ಲ ವರದಿಗಾರರು | 01 | ಪರಿಶಿಷ್ಟ ಪಂಗಡ | ಕುಮಾರಿ ಹೆಚ್.ಆರ್. ಸಾವಿತ್ರಿ, ತಂದೆ ಹೆಚ್.ಜಿ. ರಾಮಚಂದ್ರಪ್ಪ, ಮನೆ. ನಂ. 224/2, ಡಾಂಗೆ ಪಾರ್ಕ್ ಹಿಂಭಾಗ, ಕೆ.ಟಿ.ಜೆ. ನಗರ, 17ನೇ ಅಡ್ಡರಸ್ತೆ, ದಾವಣಗೆರೆ. | 66.74 | ಕುಮಾರಿ ಜೆ. ರೂಪ, ತಂದೆ ಜಗನ್ನಾಥ್, ಮನೆ ನಂ. 1461, ಕಬೀರ್ ರಸ್ತೆ, ಮಂಡಿ ಮೊಹಲ್ಲಾ ಮೈಸೂರು-21. | 57.88 |

**ಸೂಚನೆ:**

1. ಸರ್ಕಾರದ ಅಧಿಸೂಚನೆ ಸಂಖ್ಯೆ: ಡಿಪಿಎಆರ್/ 13/ ಎಸ್‌ಬಿಸಿ/ 2001, ದಿನಾಂಕ: 21.11.2001ರ ಪ್ರಕಾರ 29 ರಿಂದ 40 ವಯಸ್ಸಿನಲ್ಲಿನ ಅಭ್ಯರ್ಥಿಗಳಿಗೆ ಮೊದಲನೇ ಆದ್ಯತೆಯನ್ನು ನೀಡಬೇಕಿದ್ದು, ಆ ವಯಸ್ಸಿನ ಅಭ್ಯರ್ಥಿಗಳು ಯಾರೂ ಅರ್ಜಿಗಳನ್ನು ಸಲ್ಲಿಸದೇ ಇರುವುದರಿಂದ 18 ರಿಂದ 28 ವಯಸ್ಸಿನಲ್ಲಿನ ಅಭ್ಯರ್ಥಿಗಳು ಗಳಿಸಿರುವ ಅಂಕಗಳ ಆಧಾರದ ಮೇಲೆ ಈ ಆಯ್ಕೆ ಪಟ್ಟಿಯನ್ನು ಪ್ರಕಟಿಸಲಾಗಿದೆ.

2. ಆಯ್ಕೆ ಮಾಡಿದ ಅಭ್ಯರ್ಥಿಯ ಜೊತೆಗೆ ಹೆಚ್ಚುವರಿ ಪಟ್ಟಿಯನ್ನು ಸಹಾ ಸೂಚಿಸಲಾಗಿದೆ.

ಪೊಲೀಸ್ ಇನ್ಸ್‌ಪೆಕ್ಟರ್ ಜನರಲ್,
ರಾಜ್ಯ ಗುಪ್ತವಾರ್ತೆ.

ಪಿ.ಆರ್.549

## ಕಾರಾಗೃಹಗಳ ಉಪ ಮಹಾನಿರೀಕ್ಷಕರವರ ಕಛೇರಿ, ಕೇಂದ್ರ ಕಾರಾಗೃಹ, ಪರಪ್ಪನ ಅಗ್ರಹಾರ, ಬೆಂಗಳೂರು-560 100

### ಪ್ರಕಟಣೆ

### ಸಂಖ್ಯೆ:ಬೆಂಕೇಕಾ/ ಕಾ.ನಿ/ 5002/ 2004-05, ಬೆಂಗಳೂರು, ದಿನಾಂಕ:21ನೇ ಸೆಪ್ಟೆಂಬರ್, 2005

ಈ ಮೂಲಕ ಸಾರ್ವಜನಿಕರಲ್ಲಿ ತಿಳಿಯಪಡಿಸುವುದೇನೆಂದರೆ, ಪರಪ್ಪನ ಅಗ್ರಹಾರ ಕೇಂದ್ರ ಕಾರಾಗೃಹ ಸಮುಚ್ಛಯದಲ್ಲಿನ ಅಂಗಡಿ ಮಳಿಗೆಗಳಿಗೆ ಟೆಂಡರ್ ಆಧಾರದ ಮೇಲೆ ಸ್ಪರ್ಧಾತ್ಮಕ ದರಗಳನ್ನು ಕರೆದು 2005-06ನೇ ಸಾಲಿಗೆ ಅಂಗಡಿ ಮಳಿಗೆಗಳನ್ನು ಬಾಡಿಗೆಗೆ ಪಡೆಯಲು ಬಹಿರಂಗ ಹರಾಜನ್ನು ದಿನಾಂಕ 09.11.2005ರಂದು ಬೆಳಿಗ್ಗೆ 11.00 ಗಂಟೆಗೆ ನಿಗದಿಪಡಿಸಿದೆ. ಸಾರ್ವಜನಿಕರು ಈ ಬಹಿರಂಗ ಹರಾಜಿನಲ್ಲಿ ಭಾಗವಹಿಸುವಂತೆ ಕೋರಿದೆ.

ಈ ಸಂಸ್ಥೆಯಲ್ಲಿ ಸುಮಾರು 4000 ಕ್ಕೂ ಹೆಚ್ಚಿನ ಬಂದಿಗಳಿದ್ದು, ಪ್ರತಿದಿನ (ಸರ್ಕಾರಿ ರಜಾ ದಿನಗಳನ್ನು ಹೊರತುಪಡಿಸಿ) ನೂರಾರು ಜನರು ಸಂದರ್ಶನಕ್ಕೆ ಬಂದು ಹೋಗುತ್ತಿರುತ್ತಾರೆ. ಅಲ್ಲದೆ 450 ಜನ ಸಿಬ್ಬಂದಿಗಳು ಇಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಸಮುಚ್ಛಯದಲ್ಲಿರುವ 187 ವಸತಿ ಗೃಹಗಳಲ್ಲಿ ಸಿಬ್ಬಂದಿಗಳು ವಾಸ ಇರುವುದರಿಂದ ಸದಾ ಜನದಟ್ಟಣೆಯಿಂದ ಕೂಡಿರುವ ಈ ಸ್ಥಳದಲ್ಲಿ ಅಂಗಡಿ ಮಳಿಗೆಗಳನ್ನು ನಡೆಸುವುದರಿಂದ ವ್ಯಾಪಾರಿ ಉದ್ದೇಶವು ಸಫಲವಾಗುವ ಭರವಸೆ ನೀಡುತ್ತಾ, ಆಸಕ್ತಿಯುಳ್ಳ ಸಾರ್ವಜನಿಕರು ಹರಾಜಿನಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಭಾಗವಹಿಸುವಂತೆ ಕೋರಿದೆ.

**ಅಂಗಡಿ ಮಳಿಗೆಗಳು ತಿಂಗಳ ಬಾಡಿಗೆ ಮತ್ತು ಇತರೇ ವಿವರಗಳು ಈ ಕೆಳಕಂಡಂತೆ ಇರುತ್ತದೆ.**

| ಕ್ರ.ಸಂ. | ಅಂಗಡಿ ಮಳಿಗೆಗಳು | ಡ್ರಾಯಿಂಗ್ ಸಂಖ್ಯೆ | ತಿಂಗಳ ಬಾಡಿಗೆ | 10 ತಿಂಗಳ ಬಾಡಿಗೆಯಷ್ಟು ಭದ್ರತಾ ಠೇವಣಿ | ಹರಾಜಿನಲ್ಲಿ ಭರಿಸಬೇಕಾದ ಇಡುಪು ಠೇವಣಿ |
|---|---|---|---|---|---|
| 1. | ಹಿಟ್ಟಿನ ಗಿರಣಿ (1 ಯೂನಿಟ್) | 11 | 980 | ನಿಗದಿಯಾದ ಬಾಡಿಗೆಯ 10 ತಿಂಗಳ ಮೊತ್ತವನ್ನು ಠೇವಣಿಯಾಗಿ ಇಡುವುದು | 1000 |
| 2. | ಸಲೂನ್ (1 ಯೂನಿಟ್) | 01 | 980 | | 1000 |
| 3. | ಖಾಲಿ ಕೊಠಡಿ | 09 | 980 | | 1000 |
| 4. | ವರ್ಕ್‌ಶಾಪ್ (1 ಯೂನಿಟ್) | 10 | 980 | | 1000 |

ಹೆಚ್ಚಿನ ಮಾಹಿತಿಗಳು ಮತ್ತು ನಿಬಂಧನೆಗಳ ವಿವರಗಳನ್ನು ಕಾರಾಗೃಹಗಳ ಉಪ ಮಹಾನಿರೀಕ್ಷಕರು, ಕೇಂದ್ರ ಕಾರಾಗೃಹ, ಬೆಂಗಳೂರು, ಇವರಿಂದ, ಕಛೇರಿ ಕೆಲಸದ ವೇಳೆಯಲ್ಲಿ ಪಡೆಯಬಹುದು.

ಹರಾಜಿನ ದರವನ್ನು ಅಂಗೀಕರಿಸುವ ಅಥವಾ ತಿರಸ್ಕರಿಸುವ ಅಧಿಕಾರ ಪೊಲೀಸ್ ಮಹಾನಿರ್ದೇಶಕರು ಮತ್ತು ಕಾರಾಗೃಹಗಳ ಮಹಾನಿರೀಕ್ಷಕರು, ಬೆಂಗಳೂರು ರವರ ಅಂತಿಮ ತೀರ್ಮಾನಕ್ಕೆ ಒಳಪಟ್ಟಿರುತ್ತದೆ.

ಕಾರಾಗೃಹಗಳ ಉಪ ಮಹಾನಿರೀಕ್ಷಕರು,
ಕೇಂದ್ರ ಕಾರಾಗೃಹ, ಬೆಂಗಳೂರು.

ಪಿ.ಆರ್.550

## ಪ್ರಾಚಾರ್ಯರ ಕಾರ್ಯಾಲಯ, ಕೈಗಾರಿಕಾ ತರಬೇತಿ ಸಂಸ್ಥೆ, ತುಮಕೂರು

### ಬಹಿರಂಗ ಹರಾಜು ಪ್ರಕಟಣೆ

### ಸಂಖ್ಯೆ:ಖರೀದಿ: ಉಗ್ರಾಣ:ವಿವ.4:01-02, ತುಮಕೂರು, ದಿನಾಂಕ:26ನೇ ಸೆಪ್ಟೆಂಬರ್, 2005

**ವಿಷಯ :** ಸರ್ಕಾರಿ ಕೈಗಾರಿಕಾ ತರಬೇತಿ ಸಂಸ್ಥೆ ತುಮಕೂರು ಇಲ್ಲಿ ತಯಾರಿಸಲಾದ ಪೀಠೋಪಕರಣಗಳನ್ನು ಬಹಿರಂಗ ಹರಾಜಿನ ಮೂಲಕ ವಿಲೇವಾರಿ ಮಾಡುವ ಕುರಿತು.

ಈ ಮೂಲಕ ಸಾರ್ವಜನಿಕರಿಗೆ ತಿಳಿಯಪಡಿಸುವುದೇನೆಂದರೆ ಈ ಪ್ರಕಟಣೆಗೆ ಲಗತ್ತಿಸಿರುವ ಅನುಸೂಚಿಯಲ್ಲಿರುವ ಈ ಸಂಸ್ಥೆಯಲ್ಲಿ ತಯಾರಿಸಲಾದ ಒಟ್ಟು 3 ವಿಧದ ಪೀಠೋಪಕರಣಗಳನ್ನು ಅವು ಯಾವ ಸ್ಥಿತಿಯಲ್ಲಿ ಇವೆಯೋ ಅದೇ ಸ್ಥಿತಿಯಲ್ಲಿ ದಿನಾಂಕ: 21.11.2005ರಂದು ಬೆಳಿಗ್ಗೆ 11 ಗಂಟೆಗೆ ಈ ಸಂಸ್ಥೆಯ ಆವರಣದಲ್ಲಿ ಬಹಿರಂಗ ಹರಾಜಿನ ಮೂಲಕ ವಿಲೇವಾರಿ ಮಾಡಲು ನಿರ್ಧರಿಸಲಾಗಿದೆ. ಆದ ಪ್ರಯುಕ್ತ ಈ ಬಹಿರಂಗ ಹರಾಜಿನಲ್ಲಿ ಭಾಗವಹಿಸಲಿಚ್ಛಿಸುವ ಬಿಡ್‌ದಾರರು ಹರಾಜು ಪ್ರಾರಂಭವಾಗುವುದಕ್ಕಿಂತ ಮುಂಚೆ ರೂ. 300-00 ಗಳನ್ನು ಇಡುಗಂಟಾಗಿ ಪಾವತಿ ಮಾಡಿ ಹರಾಜಿನಲ್ಲಿ ಭಾಗವಹಿಸಬಹುದು. ಈ ಬಹಿರಂಗ ಹರಾಜು ಕೆಳಕಂಡ ನಿಬಂಧನೆಗಳಿಗೆ ಒಳಪಟ್ಟಿರುತ್ತದೆ.

1) ಇಡುಗಂಟು ಪಾವತಿ ಮಾಡಿದ ಅಂಗೀಕೃತ ಬಿಡ್‌ದಾರರು ಮಾತ್ರ ಈ ಹರಾಜಿನಲ್ಲಿ ಭಾಗವಹಿಸಬಹುದು.
2) ಬಹಿರಂಗ ಹರಾಜಿನ ನಂತರ ಹರಾಜಾದ ವಸ್ತುಗಳನ್ನು ನಿರ್ದೇಶಕರು ಉದ್ಯೋಗ ಮತ್ತು ತರಬೇತಿ ಇಲಾಖೆ, ಬೆಂಗಳೂರು ಇವರ ಅನುಮತಿಯ ನಂತರ ವಿಲೇವಾರಿ ಮಾಡಲಾಗುವುದು.
3) ಹರಾಜಿನಲ್ಲಿ ಭಾಗವಹಿಸಿ ಸಫಲರಾದ ಬಿಡ್‌ದಾರರ ಠೇವಣಿ ಹಣವನ್ನು ಹರಾಜು ಮೊತ್ತಕ್ಕೆ ಹೊಂದಾಣಿಕೆ ಮಾಡಿಕೊಳ್ಳಲಾಗುವುದು ಮತ್ತು ಹರಾಜಿನಲ್ಲಿ ವಿಫಲರಾದವರ ಠೇವಣಿ ಹಣವನ್ನು ಅಂದೇ ಹರಾಜಿನ ನಂತರ ಹಿಂದಿರುಗಿಸಲಾಗುವುದು.
4) ಹರಾಜಿನಲ್ಲಿ ಸಫಲರಾದ ಬಿಡ್‌ದಾರರು ಹರಾಜಿನ ನಂತರ ಸ್ಥಳದಲ್ಲೇ 25ರಷ್ಟು ಹಣವನ್ನು ಪಾವತಿ ಮಾಡಿ ರಶೀದಿ ಪಡೆಯತಕ್ಕದ್ದು.
5) ಬಿಡ್‌ದಾರರಿಂದ ಚೆಕ್ಕನ್ನು ಸ್ವೀಕರಿಸಲಾಗುವುದಿಲ್ಲ. ನಗದು ರೂಪದಲ್ಲಿ ಮಾತ್ರ ಹಣ ಪಾವತಿ ಮಾಡತಕ್ಕದ್ದು.
6) ಅಖೈರು ಬಿಡ್‌ದಾರರು ನಮ್ಮ ನಿರ್ದೇಶನಾಲಯದ ಅನುಮತಿ ದೊರೆತ ಕೂಡಲೇ ಹರಾಜಿನ ಒಟ್ಟು ಮೊತ್ತ ಹಾಗೂ ತತ್ಕಾಲದಲ್ಲಿ ಜಾರಿಯಲ್ಲಿರುವ ಮಾರಾಟ ತೆರಿಗೆ ಹಾಗೂ ಸರ್‌ಚಾರ್ಜ್ ಇತ್ಯಾದಿಗಳನ್ನು ನಿಯಮಾನುಸಾರ ಪಾವತಿ ಮಾಡಿ ನಿಗದಿತ ಅವಧಿ ಒಳಗೆ ಅವರ ಸ್ವಂತ ಖರ್ಚಿನಲ್ಲಿ ಹರಾಜಾದ ವಸ್ತುಗಳನ್ನು ಸಾಗಿಸಿಕೊಳ್ಳತಕ್ಕದ್ದು.
7) ಅಖೈರು ಬಿಡ್‌ದಾರರು ನಿಗದಿಪಡಿಸಿದ ಅವಧಿಯೊಳಗೆ ಪೂರ್ತಿ ಹರಾಜು ಮೊತ್ತವನ್ನು ಪಾವತಿ ಮಾಡಿ ಹರಾಜಾದ ವಸ್ತುಗಳನ್ನು ಸಾಗಿಸಿಕೊಳ್ಳದಿದ್ದಲ್ಲಿ ಅಂಥ ಬಿಡ್‌ದಾರರು ಹರಾಜಿಗೆ ಮುನ್ನ ನೀಡಿದ್ದ ಇಡುಗಂಟನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಅಂಗೀಕರಿಸಿದ್ದ ಬಿಡ್‌ನ್ನು ರದ್ದುಗೊಳಿಸಲಾಗುವುದು.
8) ಹರಾಜನ್ನು ಒಪ್ಪುವ ಅಥವಾ ರದ್ದುಪಡಿಸುವ ಹಕ್ಕು ಅಂತಿಮವಾಗಿ ಹರಾಜು ಪ್ರಾಧಿಕಾರಕ್ಕೆ ಇರುತ್ತದೆ.
9) ಈ ಬಗ್ಗೆ ಹೆಚ್ಚಿನ ಮಾಹಿತಿಗಾಗಿ ಪ್ರಾಚಾರ್ಯರನ್ನು ಕಛೇರಿ ವೇಳೆಯಲ್ಲಿ ಸಂಪರ್ಕಿಸಬಹುದು.

ಪ್ರಾಚಾರ್ಯರು,
ಸರ್ಕಾರಿ ಕೈಗಾರಿಕಾ ತರಬೇತಿ ಸಂಸ್ಥೆ,
ಬಿ.ಹೆಚ್. ರಸ್ತೆ, ತುಮಕೂರು.

ಪಿ.ಆರ್.551

## ಪೊಲೀಸ್ ಅಧೀಕ್ಷಕರವರ ಕಛೇರಿ, ಚಿಕ್ಕಮಗಳೂರು ಜಿಲ್ಲೆ, ಚಿಕ್ಕಮಗಳೂರು

## ಸಂಕ್ಷಿಪ್ತ ಅಧಿಸೂಚನೆ

**ಸಂಖ್ಯೆ:ಲೆಕ್ಕ(5): 119: 2003-04, ಚಿಕ್ಕಮಗಳೂರು, ದಿನಾಂಕ:30ನೇ ಸೆಪ್ಟೆಂಬರ್, 2005**

**ವಿಷಯ :** ಚಿಕ್ಕಮಗಳೂರು ಜಿಲ್ಲೆಯ ಪೊಲೀಸ್ ಇಲಾಖೆಯ ನಿರುಪಯುಕ್ತಗೊಳಿಸಲಾಗಿರುವ 1 ಟ್ರಕ್, 1 ಜೀಪು ಹಾಗೂ 1 ಮೋಟಾರ್ ಸೈಕಲ್‌ಗಳನ್ನು ಟೆಂಡರ್ ಕಂ ಹರಾಜು ಮೂಲಕ ದಿನಾಂಕ: 30.10.2005 ರಂದು ವಿಲೇವಾರಿ ಮಾಡುವ ಬಗ್ಗೆ.

**ಉಲ್ಲೇಖ :** 1. ಪ್ರಧಾನ ಕಛೇರಿ ಆದೇಶ ಸಂಖ್ಯೆ: ವಾಸ(1): 89: 2004-05, ದಿನಾಂಕ: 14.05.2005.

2. ಸರ್ಕಾರದ ಆದೇಶ ಸಂಖ್ಯೆ: ಹೆಚ್‌ಡಿ:03: ಇಎಂವಿ: 2004, ಬೆಂಗಳೂರು, ದಿನಾಂಕ: 12.05.2005.

ಸಾರ್ವಜನಿಕರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಉಲ್ಲೇಖ (1), (2)ರ ಆದೇಶದಲ್ಲಿ ನಿರುಪಯುಕ್ತಗೊಳಿಸಲಾಗಿರುವ ಚಿಕ್ಕಮಗಳೂರು ಜಿಲ್ಲಾ ಪೊಲೀಸ್‌ನ ಈ ಕೆಳಕಂಡ ವಾಹನಗಳನ್ನು ದಿನಾಂಕ: 30.10.2005 ರಂದು ಬೆಳಿಗ್ಗೆ 11.00 ಗಂಟೆಗೆ ಚಿಕ್ಕಮಗಳೂರು ಜಿಲ್ಲಾ ಸಶಸ್ತ್ರ ಮೀಸಲು ಪಡೆಯ ಆವರಣದಲ್ಲಿ ಬಹಿರಂಗ ಹರಾಜು ಮೂಲಕ ವಿಲೇವಾರಿ ಮಾಡಲಾಗುವುದು. ಆಸಕ್ತಿವುಳ್ಳ ಸಾರ್ವಜನಿಕರು ಬಹಿರಂಗ ಹರಾಜಿನಲ್ಲಿ ಭಾಗವಹಿಸಿ ಈ ವಾಹನವನ್ನು ಖರೀದಿಸಬಹುದಾಗಿದೆ.

| ಕ್ರಮ ಸಂಖ್ಯೆ | ವಾಹನದ ನೋಂದಣಿ ಸಂಖ್ಯೆ | ಮಾದರಿ | ಖರೀದಿಸಿದ ವರ್ಷ |
|---|---|---|---|
| 1. | ಎಂ.ವೈ.ಸಿ. 2869 | ಹಿಂದೂಸ್ತಾನಿ ಬಿಡ್‌ಫೋರ್ಡ್ (ಲಾರಿ) | 1976 |
| 2. | ಸಿ.ಎ.ಜಿ.3858 | ಬುಲೆಟ್ ಮೋಟಾರ್ ಸೈಕಲ್ | 1986. |
| 3. | ಎಂ.ವೈ.ಸಿ. 2888 | ಮಹೇಂದ್ರ ಜೀಪು | 1977 |

ಟೆಂಡರ್ ಕಂ ಬಹಿರಂಗ ಹರಾಜನ್ನು ಈ ಕೆಳಕಂಡ ಷರತ್ತುಗಳು ಮತ್ತು ನಿಬಂಧನೆಗಳಿಗೆ ಒಳಪಟ್ಟಂತೆ ನಡೆಸಲಾಗುವುದು.

**ಹರಾಜಿನ ಷರತ್ತು ಮತ್ತು ನಿಬಂಧನೆಗಳು:**

1) ನಿರುಪಯುಕ್ತ ಬಿಡಿಭಾಗಗಳು ಜಿಲ್ಲಾ ಸಶಸ್ತ್ರ ಮೀಸಲು ಪಡೆಯ ರಾಮನಹಳ್ಳಿ ಚಿಕ್ಕಮಗಳೂರಿನಲ್ಲಿ ಹಾಲಿ ಯಾವ ಸ್ಥಿತಿಯಲ್ಲಿ ಇರುತ್ತವೆಯೋ ಅದೇ ಸ್ಥಿತಿಯಲ್ಲಿ ವಿಲೇವಾರಿ ಮಾಡಲಾಗುವುದು.

2) ಹರಾಜಿನಲ್ಲಿ ಭಾಗವಹಿಸಲು ಇಚ್ಛಿಸುವ ಪ್ರತಿಯೊಬ್ಬರೂ ರೂ.3,000-00 (ಮೂರು ಸಾವಿರ ರೂಪಾಯಿ) ಠೇವಣಿ ಹಣವನ್ನು ಹರಾಜಿಗೆ ಮುನ್ನ ನಗದಾಗಿ ಪಾವತಿಸತಕ್ಕದ್ದು. ಠೇವಣಿ ಹಣ ಪಾವತಿಸದವರು ಹರಾಜಿನಲ್ಲಿ ಭಾಗವಹಿಸುವಂತಿಲ್ಲ.

3) ಈ ನಿರುಪಯುಕ್ತ ವಸ್ತುಗಳ ಖರೀದಿಗೆ ಟೆಂಡರ್ ಸಲ್ಲಿಸಬಯಸುವ ಆಸಕ್ತ ಸಾರ್ವಜನಿಕರು ರೂ. 3000-00 (ಮೂರು ಸಾವಿರ ರೂಪಾಯಿಗಳು) ಗಳ ಠೇವಣಿ ಹಣವನ್ನು "ಪೊಲೀಸ್ ಸೂಪರಿಂಟೆಂಡೆಂಟ್, ಚಿಕ್ಕಮಗಳೂರು ಜಿಲ್ಲೆ" ಇವರ ನಗದು ಶಾಖೆಯಲ್ಲಿ ನಗದು ತುಂಬಿ "ನಿರುಪಯುಕ್ತ ವಾಹನಗಳ ಖರೀದಿಗಾಗಿ" ಎಂದು ಸ್ಪಷ್ಟವಾಗಿ ನಮೂದಿಸಿದ ಪಟ್ಟಿ ಮಾಡಲಾದ ಟೆಂಡರ್‌ಗಳನ್ನು ದಿನಾಂಕ: 28.10.2005ರ ಸಂಜೆ 4.00 ಗಂಟೆಯ ಒಳಗಾಗಿ ಈ ಕಛೇರಿಗೆ ತಲುಪುವಂತೆ ಸಲ್ಲಿಸಬೇಕು. (ಟೆಂಡರ್ ಫಾರಂ ನಮೂನೆಯನ್ನು ಈ ಅಧಿಸೂಚನೆಯ ಕೊನೆಯಲ್ಲಿ ಕೊಡಲಾಗಿದೆ.)

4) ಟೆಂಡರ್ ಫಾರಂನಲ್ಲಿ ಬಿಡ್ ಮೊತ್ತವನ್ನು ಅಂಕಿ ಮತ್ತು ಅಕ್ಷರದಲ್ಲಿ ಎರಡರಲ್ಲಿಯೂ ಸ್ಪಷ್ಟವಾಗಿ ನಮೂದಿಸಿರಬೇಕು. ಏನಾದರೂ ತಿದ್ದುಪಡಿ ಮಾಡಿದ್ದಲ್ಲಿ ಟೆಂಡರ್‌ದಾರರು ತಮ್ಮ ಪೂರ್ಣ ಸಹಿ ಮಾಡಿ ತಿದ್ದುಪಡಿಯನ್ನು ದೃಢೀಕರಿಸಬೇಕು. ಟೆಂಡರ್ ಫಾರಂಗಳನ್ನು ವರ್ಗಾವಣೆ ಮಾಡಲಾಗುವುದಿಲ್ಲ.

5) ಬಹಿರಂಗ ಹರಾಜಿನಲ್ಲಿ ಅತಿ ಹೆಚ್ಚಿನ ಬೆಲೆ ದಾಖಲುಗೊಳಿಸಿದ ನಂತರ ಸ್ವೀಕೃತವಾದ ಟೆಂಡರ್ ಲಕೋಟೆಗಳನ್ನು ಪೊಲೀಸ್ ಸೂಪರಿಂಟೆಂಡೆಂಟ್, ಚಿಕ್ಕಮಗಳೂರು ಜಿಲ್ಲೆ ರವರಿಗಾಗಲೀ ಅಥವಾ ಅವರಿಂದ ನೇಮಿಸಲ್ಪಟ್ಟ ಅಧಿಕಾರಿಯವರಿಗಾಗಲೀ ಸಾರ್ವಜನಿಕರ ಸಮ್ಮುಖದಲ್ಲಿ ಕರೆದು ಬಹಿರಂಗ ಪಡಿಸುವುದು. ಹರಾಜಿನಲ್ಲಿ ದಾಖಲಾದ ಅತಿ ಹೆಚ್ಚಿನ ಬೆಲೆ ಅಥವಾ ಟೆಂಡರ್‌ನಲ್ಲಿ ದಾಖಲಿಸಿದ ಅತೀ ಹೆಚ್ಚಿನ ಬೆಲೆ ಇವರೆಡರಲ್ಲಿ ಅತೀ ಹೆಚ್ಚಿನ ದರ ದಾಖಲಿಸಿದವರನ್ನು ಯಶಸ್ವಿ ಟೆಂಡರ್ ಬಿಡ್‌ದಾರರೆಂದು ಪರಿಗಣಿಸಲಾಗುವುದು.

6) ಯಶಸ್ವಿಯಾದ ಟೆಂಡರ್: ಬಿಡ್‌ದಾರರು ಅಂಗೀಕೃತ ಹೆಚ್ಚಿನ ಬೆಲೆಯ ಶೇ.25ರಷ್ಟು (ಠೇವಣಿ ಬಿಟ್ಟು) ಹಣವನ್ನು ಹರಾಜಿನ ಸ್ಥಳದಲ್ಲಿ ಅದೇ ದಿನವೇ ತುಂಬತಕ್ಕದ್ದು. ಈ ಹಣಕ್ಕೆ ಯಾವುದೇ ಬಡ್ಡಿಯನ್ನು ನೀಡಲಾಗದು. ಡೈರೆಕ್ಟರ್ ಜನರಲ್ ಮತ್ತು ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಕರ್ನಾಟಕ ರಾಜ್ಯ ಬೆಂಗಳೂರು ಇವರಿಂದ ವಿಲೇವಾರಿ ಒಪ್ಪಿಗೆ ಬಂದ ನಂತರವೇ ಉಳಿದ ಭಾಗವನ್ನು ಬಿಡ್‌ದಾರರಿಂದ **ಕಟ್ಟಿಸಿಕೊಂಡು** ವಾಹನಗಳನ್ನು ವಹಿಸಿಕೊಡಲಾಗುವುದು. ಈ ವಾಹನಗಳನ್ನು ಯಶಸ್ವಿ ಬಿಡ್‌ದಾರರು ತಮ್ಮ ಸ್ವಂತ ಖರ್ಚಿನಲ್ಲಿ ತೆಗೆದುಕೊಂಡು ಹೋಗುವುದು. ತಪ್ಪಿದ್ದಲ್ಲಿ ಅವರು ತುಂಬಿದ 25ರಷ್ಟು ಹಣವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಲಾಗುವುದು. ಹಾಗೂ ಮತ್ತೊಮ್ಮೆ ಹೊಸದಾಗಿ ಅಧಿಸೂಚನೆಯನ್ನು ಹೊರಡಿಸಿ ವಾಹನಗಳನ್ನು ಹರಾಜು ಮಾಡಲಾಗುವುದು.

7) ಯಶಸ್ವಿ ಬಿಡ್‌ದಾರರು ಎಲ್ಲಾ ಹಣವನ್ನು **ಪೊಲೀಸ್ ಅಧೀಕ್ಷಕರ ಕಛೇರಿ,** ಚಿಕ್ಕಮಗಳೂರು, ನಗದು ಶಾಖೆಯಲ್ಲಿ ನಗದಾಗಿ ತುಂಬುವುದು. ನಿರುಪಯುಕ್ತ ವಾಹನಗಳಿಗೆ ಮಾರಾಟ ತೆರಿಗೆಯನ್ನು ಯಶಸ್ವಿ ಬಿಡ್‌ದಾರರಿಂದ ಚಾಲ್ತಿಯಲ್ಲಿರುವ ನಿಯಮಗಳ ಪ್ರಕಾರ ವಸೂಲಿ ಮಾಡಲಾಗುವುದು.

8) ಹರಾಜಿನಲ್ಲಿ ಭಾಗವಹಿಸುವ ಸಾರ್ವಜನಿಕರು ಇಲಾಖಾ ನಿಯಮಗಳಿಗೆ ಬದ್ಧರಾಗಿರುತ್ತಾರೆ.

9) ಹರಾಜಿನಲ್ಲಿ ಯಾವುದೇ ಸವಾಲನ್ನು ಯಾವುದೇ ಕಾರಣಕ್ಕೂ ರದ್ದು ಮಾಡುವ ಇಲ್ಲವೇ ತಿರಸ್ಕರಿಸುವ ಅಧಿಕಾರವನ್ನು ಪೊಲೀಸ್ ಅಧೀಕ್ಷಕರು, ಚಿಕ್ಕಮಗಳೂರು ರವರು ಹೊಂದಿರುತ್ತಾರೆ. ಹಾಗೂ ಅವರ ತೀರ್ಮಾನವೇ ಅಂತಿಮವಾದುದು.

10) ಬಹಿರಂಗ ಹರಾಜಿನ ವಿಷಯದಲ್ಲಿ ಯಾವುದೇ ವಾದ ವಿವಾದ ಉಂಟಾದಲ್ಲಿ ಪೊಲೀಸ್ ಅಧೀಕ್ಷಕರು, ಚಿಕ್ಕಮಗಳೂರು ರವರು ಮಾಡುವ ನಿರ್ಣಯವೇ ಅಂತಿಮವಾಗಿರುತ್ತದೆ.

11) ಹರಾಜಿನಲ್ಲಿ ಯಶಸ್ವಿಯಾಗದೇ ಇರುವಂತಹ ಸವಾಲುದಾರರ ಠೇವಣಿಯನ್ನು ಹರಾಜು ಮುಗಿದ ನಂತರ ತಕ್ಷಣ ಅವರಿಗೆ ಹಿಂತಿರುಗಿಸಲಾಗುವುದು.

12) ಹರಾಜಿನಲ್ಲಿ ಭಾಗವಹಿಸಲು ಇಚ್ಛಿಸುವವರು ನಿರುಪಯುಕ್ತ ವಾಹನಗಳನ್ನು ಕಛೇರಿಯ ವೇಳೆಯಲ್ಲಿ ಡಿಎಆರ್, ಚಿಕ್ಕಮಗಳೂರು ಇಲ್ಲಿ ವೀಕ್ಷಿಸಬಹುದು.

13) ಭರ್ತಿ ಮಾಡಿದ ಟೆಂಡರ್ ಫಾರಂಗಳಲ್ಲಿ ಟೆಂಡರ್‌ದಾರರು ತಮ್ಮ ಸಂಪೂರ್ಣ ವಿಳಾಸವನ್ನು ಸ್ಪಷ್ಟವಾಗಿ ನಮೂದಿಸುವುದು.

**"ಟೆಂಡರ್ ಫಾರಂನ ನಮೂನೆ"**

**ನಿರುಪಯುಕ್ತ ಪೊಲೀಸ್ ವಾಹನಗಳ ಟೆಂಡರ್‌ಗೆ ಹರಾಜು:**

ಗೆ.

ಪೊಲೀಸ್ ಅಧೀಕ್ಷಕರು,
ಚಿಕ್ಕಮಗಳೂರು ಜಿಲ್ಲೆ, ಚಿಕ್ಕಮಗಳೂರು.

ಮಾನ್ಯರೆ,

ತಮ್ಮ ಕಛೇರಿಯ ಟೆಂಡರ್ ಪ್ರಕಟಣೆ ನಂ. ಲೆಕ್ಕ (5) 119:2003-04, ದಿನಾಂಕ ರಲ್ಲಿ ತಿಳಿಸಿರುವ..................ಸಾಲಿನ ನಿರುಪಯುಕ್ತವಾದ ವಾಹನಗಳು (ಟ್ರಕ್, ಜೀಪು, ಮೋಟಾರ್ ಸೈಕಲ್) ರೂ......................ಗಳಿಗೆ ಖರೀದಿಸಲು ಇಚ್ಛಿಸಿರುತ್ತೇನೆ.

ತಮ್ಮ ವಿಶ್ವಾಸಿ,

ದಿನಾಂಕ: (ಬಿಡ್‌ದಾರರ ಸಹಿ ಮತ್ತು ವಿಳಾಸ)

ಸ್ಥಳ:

ಪೊಲೀಸ್ ಅಧೀಕ್ಷಕರು,
ಪಿ.ಆರ್.552 ಚಿಕ್ಕಮಗಳೂರು ಜಿಲ್ಲೆ.

## ಪೊಲೀಸ್ ಅಧೀಕ್ಷಕರವರ ಕಛೇರಿ, ಚಿಕ್ಕಮಗಳೂರು ಜಿಲ್ಲೆ, ಚಿಕ್ಕಮಗಳೂರು

## ಬಹಿರಂಗ ಹರಾಜು ಪ್ರಕಟಣೆ

**ಸಂಖ್ಯೆ:ಲೆಕ್ಕ(5): 126: 2004-05, ಚಿಕ್ಕಮಗಳೂರು, ದಿನಾಂಕ:30ನೇ ಸೆಪ್ಟೆಂಬರ್, 2005**

**ವಿಷಯ :** ಚಿಕ್ಕಮಗಳೂರು ಜಿಲ್ಲೆಯ ಪೊಲೀಸ್ ವಾಹನಗಳಿಂದ ಶೇಖರಿಸಲ್ಪಟ್ಟ 2003-04ನೇ ಸಾಲಿನ ಮೋಟಾರು ವಾಹನಗಳ ನಿರುಪಯುಕ್ತ ಬಿಡಿಭಾಗಗಳು, ಟೈಯರ್, ಟ್ಯೂಬ್ ಮತ್ತು ಬ್ಯಾಟರಿಗಳನ್ನು ಬಹಿರಂಗ ಹರಾಜು ಮಾಡುವ ಕುರಿತು.

**ಉಲ್ಲೇಖ :** 1. ಸರ್ಕಾರದ ಆದೇಶ ಸಂಖ್ಯೆ: ಹೆಚ್‌ಡಿ: 198: ಇಎಂವಿ: 2000, ದಿನಾಂಕ: 19.06.2003.
2. ಪೊಲೀಸ್ ಪ್ರಧಾನ ಕಛೇರಿ, ಬೆಂಗಳೂರು ರವರ ಪತ್ರ ನಂ.ವಾಸ (3): 1:97-98 (ವಾಲ್ಯೂಂ-111) ದಿನಾಂಕ: 05.06.2004.

ಈ ಮೂಲಕ ಸಾರ್ವಜನಿಕರಿಗೆ ತಿಳಿಯಪಡಿಸುವುದೇನೆಂದರೆ, ಚಿಕ್ಕಮಗಳೂರು ಜಿಲ್ಲಾ ಸಶಸ್ತ್ರ ಮೀಸಲು ಪಡೆ, ರಾಮನಹಳ್ಳಿ, ಚಿಕ್ಕಮಗಳೂರಿನಲ್ಲಿ ಸಂಗ್ರಹಿಸಲಾಗಿದ್ದ ಯಥಾ ಸ್ಥಿತಿಯಲ್ಲಿರುವ ಈ ಕೆಳಕಂಡ ಪೊಲೀಸ್ ವಾಹನಗಳ ನಿರುಪಯುಕ್ತ ಬಿಡಿಭಾಗಗಳು, ಟೈಯರ್, ಟ್ಯೂಬ್ ಮತ್ತು ಬ್ಯಾಟರಿಗಳನ್ನು ಬಹಿರಂಗ ಹರಾಜು ಪ್ರಕಟಣೆ (ಟೆಂಡರ್ ಕಮ್ ಆಕ್ಷನ್ ಸೇಲ್) ಮೂಲಕ ಚಿಕ್ಕಮಗಳೂರು ಜಿಲ್ಲೆಯ ಸಶಸ್ತ್ರ ಮೀಸಲು ಪಡೆಯ ಆವರಣದಲ್ಲಿ ದಿನಾಂಕ: 30.10.2005ರಂದು ಬೆಳಿಗ್ಗೆ 11.00 ಗಂಟೆಗೆ ವಿಲೇವಾರಿ ಮಾಡಲಾಗುವುದು. ಆಸಕ್ತಿಯುಳ್ಳವರು ಭಾಗವಹಿಸಬಹುದು. ನಿರುಪಯುಕ್ತ ಬಿಡಿಭಾಗಗಳ ವಿವರ ಈ ಕೆಳಕಂಡಂತೆ ಇರುತ್ತದೆ.

| ಕ್ರಮ ಸಂಖ್ಯೆ | ವಿವರಣೆ | ಅನುಪಯುಕ್ತ ವಸ್ತುಗಳು |
|---|---|---|
| 1. | ನಿರುಪಯುಕ್ತ ಬಿಡಿಭಾಗಗಳು. | ಕ್ರಮ ಸಂಖ್ಯೆ.1 ರಿಂದ 758. |
| 2. | ಟೈರು ಮತ್ತು ಟ್ಯೂಬ್ | 85 ಟೈರು, 85 ಟ್ಯೂಬ್. |
| 3. | ಬ್ಯಾಟರಿಗಳು | 6 ವೋಲ್ಟ್ 7 ಪ್ಲೇಟ್ 4<br>12 ವೋಲ್ಟ್ 13 ಪ್ಲೇಟ್ 19<br>12 ವೋಲ್ಟ್ 13 ಪ್ಲೇಟ್ 4 |
| | **ಒಟ್ಟು** | 27 |

**ಹರಾಜಿನ ಷರತ್ತು ಮತ್ತು ನಿಬಂಧನೆಗಳು:**

1) ನಿರುಪಯುಕ್ತ ಬಿಡಿಭಾಗಗಳು ಜಿಲ್ಲಾ ಸಶಸ್ತ್ರ ಮೀಸಲು ಪಡೆಯ ರಾಮನಹಳ್ಳಿ ಚಿಕ್ಕಮಗಳೂರಿನಲ್ಲಿ ಹಾಲಿ ಯಾವ ಸ್ಥಿತಿಯಲ್ಲಿ ಇರುತ್ತವೆಯೋ ಅದೇ ಸ್ಥಿತಿಯಲ್ಲಿ ವಿಲೇವಾರಿ ಮಾಡಲಾಗುವುದು.

2) ಹರಾಜಿನಲ್ಲಿ ಭಾಗವಹಿಸಲು ಇಚ್ಛಿಸುವ ಪ್ರತಿಯೊಬ್ಬರೂ ರೂ.1,000-00 (ಒಂದು ಸಾವಿರ ರೂಪಾಯಿ) ಠೇವಣಿ ಹಣವನ್ನು ಹರಾಜಿಗೆ ಮುನ್ನ ನಗದಾಗಿ ಪಾವತಿಸತಕ್ಕದ್ದು. ಠೇವಣಿ ಹಣ ಪಾವತಿಸದವರು ಹರಾಜಿನಲ್ಲಿ ಭಾಗವಹಿಸುವಂತಿಲ್ಲ.

3) ಈ ನಿರುಪಯುಕ್ತ ವಸ್ತುಗಳ ಖರೀದಿಗೆ ಟೆಂಡರ್ ಸಲ್ಲಿಸಬಯಸುವ ಆಸಕ್ತ ಸಾರ್ವಜನಿಕರು ರೂ. 1000-00 (ಒಂದು ಸಾವಿರ ರೂಪಾಯಿಗಳು) ಗಳ ಠೇವಣಿ ಹಣವನ್ನು "ಪೊಲೀಸ್ ಸೂಪರಿಂಟೆಂಡೆಂಟ್, ಚಿಕ್ಕಮಗಳೂರು ಜಿಲ್ಲೆ" ಇವರ ನಗದು ಶಾಖೆಯಲ್ಲಿ ನಗದು ತುಂಬಿ "ನಿರುಪಯುಕ್ತ ವಾಹನ ಟೈರು, ಟ್ಯೂಬ್, ಬಿಡಿಭಾಗಗಳ ಖರೀದಿಗಾಗಿ" ಎಂದು ಸ್ಪಷ್ಟವಾಗಿ ನಮೂದಿಸಿದ ಪಟ್ಟಿ ಮಾಡಲಾದ ಟೆಂಡರ್‌ಗಳನ್ನು ದಿನಾಂಕ: 28.10.2005ರ ಸಂಜೆ 4.00 ಗಂಟೆಯ ಒಳಗಾಗಿ ಈ ಕಛೇರಿಗೆ ತಲುಪುವಂತೆ ಸಲ್ಲಿಸಬೇಕು. (ಟೆಂಡರ್ ಫಾರಂ ನಮೂನೆಯನ್ನು ಈ ಅಧಿಸೂಚನೆಯ ಕೊನೆಯಲ್ಲಿ ಕೊಡಲಾಗಿದೆ.)

4) ಟೆಂಡರ್ ಫಾರಂನಲ್ಲಿ ಬಿಡ್ ಮೊತ್ತವನ್ನು ಅಂಕಿ ಮತ್ತು ಅಕ್ಷರದಲ್ಲಿ ಎರಡರಲ್ಲಿಯೂ ಸ್ಪಷ್ಟವಾಗಿ ನಮೂದಿಸಿರಬೇಕು. ಏನಾದರೂ ತಿದ್ದುಪಡಿ ಮಾಡಿದ್ದಲ್ಲಿ ಟೆಂಡರ್‌ದಾರರು ತಮ್ಮ ಪೂರ್ಣ ಸಹಿ ಮಾಡಿ ತಿದ್ದುಪಡಿಯನ್ನು ದೃಢೀಕರಿಸಬೇಕು. ಟೆಂಡರ್ ಫಾರಂಗಳನ್ನು ವರ್ಗಾವಣೆ ಮಾಡಲಾಗುವುದಿಲ್ಲ.

5) ಬಹಿರಂಗ ಹರಾಜಿನಲ್ಲಿ ಅತಿ ಹೆಚ್ಚಿನ ಬೆಲೆ ದಾಖಲುಗೊಳಿಸಿದ ನಂತರ ಸ್ವೀಕೃತವಾದ ಟೆಂಡರ್ ಲಕೋಟೆಗಳನ್ನು ಪೊಲೀಸ್ ಸೂಪರಿಂಟೆಂಡೆಂಟ್, ಚಿಕ್ಕಮಗಳೂರು ಜಿಲ್ಲೆ ರವರಿಗಾಗಲೀ ಅಥವಾ ಅವರಿಂದ ನೇಮಿಸಲ್ಪಟ್ಟ ಅಧಿಕಾರಿಯವರಿಗಾಗಲೀ ಸಾರ್ವಜನಿಕರ ಸಮ್ಮುಖದಲ್ಲಿ ಕರೆದು ಬಹಿರಂಗ ಪಡಿಸುವುದು. ಹರಾಜಿನಲ್ಲಿ ದಾಖಲಾದ ಅತಿ ಹೆಚ್ಚಿನ ಬೆಲೆ ಅಥವಾ ಟೆಂಡರ್‌ನಲ್ಲಿ ದಾಖಲಿಸಿದ ಅತೀ ಹೆಚ್ಚಿನ ಬೆಲೆ ಇವೆರಡರಲ್ಲಿ ಅತೀ ಹೆಚ್ಚಿನ ದರ ದಾಖಲಿಸಿದವರನ್ನು ಯಶಸ್ವಿ ಟೆಂಡರ್ ಬಿಡ್‌ದಾರರೆಂದು ಪರಿಗಣಿಸಲಾಗುವುದು.

6) ಯಶಸ್ವಿಯಾದ ಟೆಂಡರ್: ಬಿಡ್‌ದಾರರು ಅಂಗೀಕೃತ ಹೆಚ್ಚಿನ ಬೆಲೆಯ ಶೇ.25ರಷ್ಟು (ಠೇವಣಿ ಬಿಟ್ಟು) ಹಣವನ್ನು ಹರಾಜಿನ ಸ್ಥಳದಲ್ಲಿ ಅದೇ ದಿನವೇ ತುಂಬತಕ್ಕದ್ದು. ಈ ಹಣಕ್ಕೆ ಯಾವುದೇ ಬಡ್ಡಿಯನ್ನು ನೀಡಲಾಗದು. ಡೈರೆಕ್ಟರ್ ಜನರಲ್ ಮತ್ತು ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಕರ್ನಾಟಕ ರಾಜ್ಯ ಬೆಂಗಳೂರು ಇವರಿಂದ ವಿಲೇವಾರಿ ಒಪ್ಪಿಗೆ ಬಂದ ನಂತರವೇ ಉಳಿದ ಭಾಗವನ್ನು ಬಿಡ್‌ದಾರರಿಂದ **ಕಟ್ಟಿಸಿಕೊಂಡು** ಬಿಡಿಭಾಗಗಳನ್ನು ವಹಿಸಿಕೊಡಲಾಗುವುದು. ಈ ಬಿಡಿಭಾಗಗಳನ್ನು ಯಶಸ್ವಿ ಬಿಡ್‌ದಾರರು ತಮ್ಮ ಸ್ವಂತ ಖರ್ಚಿನಲ್ಲಿ ತೆಗೆದುಕೊಂಡು ಹೋಗುವುದು. ತಪ್ಪಿದ್ದಲ್ಲಿ ಅವರು ತುಂಬಿದ 25ರಷ್ಟು ಹಣವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಲಾಗುವುದು. ಹಾಗೂ ಮತ್ತೊಮ್ಮೆ ಹೊಸದಾಗಿ ಅಧಿಸೂಚನೆಯನ್ನು ಹೊರಡಿಸಿ ಬಿಡಿಭಾಗಗಳನ್ನು ಹರಾಜು ಮಾಡಲಾಗುವುದು.

7) ಯಶಸ್ವಿ ಬಿಡ್‌ದಾರರು ಎಲ್ಲಾ ಹಣವನ್ನು **ಪೊಲೀಸ್ ಅಧೀಕ್ಷಕರ ಕಛೇರಿ,** ಚಿಕ್ಕಮಗಳೂರು, ನಗದು ಶಾಖೆಯಲ್ಲಿ ನಗದಾಗಿ ತುಂಬುವುದು. ನಿರುಪಯುಕ್ತ ವಾಹನಗಳಿಗೆ ಮಾರಾಟ ತೆರಿಗೆಯನ್ನು ಯಶಸ್ವಿ ಬಿಡ್‌ದಾರರಿಂದ ಚಾಲ್ತಿಯಲ್ಲಿರುವ ನಿಯಮಗಳ ಪ್ರಕಾರ ವಸೂಲಿ ಮಾಡಲಾಗುವುದು.

8) ಹರಾಜಿನಲ್ಲಿ ಭಾಗವಹಿಸುವ ಸಾರ್ವಜನಿಕರು ಇಲಾಖಾ ನಿಯಮಗಳಿಗೆ ಬದ್ಧರಾಗಿರುತ್ತಾರೆ.

9) ಹರಾಜಿನಲ್ಲಿ ಯಾವುದೇ ಸವಾಲನ್ನು ಯಾವುದೇ ಕಾರಣಕ್ಕೂ ರದ್ದು ಮಾಡುವ ಇಲ್ಲವೇ ತಿರಸ್ಕರಿಸುವ ಅಧಿಕಾರವನ್ನು ಪೊಲೀಸ್ ಅಧೀಕ್ಷಕರು, ಚಿಕ್ಕಮಗಳೂರು ರವರು ಹೊಂದಿರುತ್ತಾರೆ. ಹಾಗೂ ಅವರ ತೀರ್ಮಾನವೇ ಅಂತಿಮವಾದುದು.

10) ಬಹಿರಂಗ ಹರಾಜಿನ ವಿಷಯದಲ್ಲಿ ಯಾವುದೇ ವಾದ ವಿವಾದ ಉಂಟಾದಲ್ಲಿ ಪೊಲೀಸ್ ಅಧೀಕ್ಷಕರು, ಚಿಕ್ಕಮಗಳೂರು ರವರು ಮಾಡುವ ನಿರ್ಣಯವೇ ಅಂತಿಮವಾಗಿರುತ್ತದೆ.

11) ಹರಾಜಿನಲ್ಲಿ ಯಶಸ್ವಿಯಾಗದೇ ಇರುವಂತಹ ಸವಾಲುದಾರರ ಠೇವಣಿಯನ್ನು ಹರಾಜು ಮುಗಿದ ನಂತರ ತಕ್ಷಣ ಅವರಿಗೆ ಹಿಂತಿರುಗಿಸಲಾಗುವುದು.

12) ಹರಾಜಿನಲ್ಲಿ ಭಾಗವಹಿಸಲು ಇಚ್ಛಿಸುವವರು ನಿರುಪಯುಕ್ತ ಬಿಡಿಭಾಗಗಳನ್ನು ಕಛೇರಿಯ ವೇಳೆಯಲ್ಲಿ ಡಿಎಆರ್, ಚಿಕ್ಕಮಗಳೂರು ಇಲ್ಲಿ ವೀಕ್ಷಿಸಬಹುದು.

13) ಭರ್ತಿ ಮಾಡಿದ ಟೆಂಡರ್ ಫಾರಂಗಳಲ್ಲಿ ಟೆಂಡರ್‌ದಾರರು ತಮ್ಮ ಸಂಪೂರ್ಣ ವಿಳಾಸವನ್ನು ಸ್ಪಷ್ಟವಾಗಿ ನಮೂದಿಸುವುದು.

**"ಟೆಂಡರ್ ಫಾರಂನ ನಮೂನೆ"**

**ಪೊಲೀಸ್ ವಾಹನಗಳ ನಿರುಪಯುಕ್ತ ಬಿಡಿಭಾಗಗಳು: ಟೈರು, ಟ್ಯೂಬ್, ಬ್ಯಾಟರಿಗಳಿಗಾಗಿ ಟೆಂಡರ್.**

ಗೆ.

ಪೊಲೀಸ್ ಅಧೀಕ್ಷಕರು,
ಚಿಕ್ಕಮಗಳೂರು ಜಿಲ್ಲೆ, ಚಿಕ್ಕಮಗಳೂರು.

ಮಾನ್ಯರೆ,

ತಮ್ಮ ಕಛೇರಿಯ ಟೆಂಡರ್ ಪ್ರಕಟಣೆ ನಂ. ಲೆಕ್ಕ (5) 123:2004-05, ದಿನಾಂಕ ರಲ್ಲಿ ತಿಳಿಸಿರುವ..................ಸಾಲಿನ ನಿರುಪಯುಕ್ತವಾದ ಬಿಡಿಭಾಗಗಳು: ಟೈರು, ಟ್ಯೂಬ್, ಬ್ಯಾಟರಿಗಳು ರೂ......................ಗಳಿಗೆ ಖರೀದಿಸಲು ಇಚ್ಛಿಸಿರುತ್ತೇನೆ.

ತಮ್ಮ ವಿಶ್ವಾಸಿ,
(ಬಿಡ್‌ದಾರರ ಸಹಿ ಮತ್ತು ವಿಳಾಸ)

ದಿನಾಂಕ:
ಸ್ಥಳ:

ಪೊಲೀಸ್ ಅಧೀಕ್ಷಕರು,
ಚಿಕ್ಕಮಗಳೂರು ಜಿಲ್ಲೆ.

ಪಿ.ಆರ್.553

## ಉಪ ಕೃಷಿ ನಿರ್ದೇಶಕರ ಕಛೇರಿ, ರಾಜ್ಯ ಮಣ್ಣು ಸಮೀಕ್ಷೆ, ಕೃಷಿ ಆಯುಕ್ತರ ಕಾರ್ಯಾಲಯ, ಶೇಷಾದ್ರಿ ರಸ್ತೆ, ಬೆಂಗಳೂರು
## ರೀಟೆಂಡರ್ ಕಂ ಬಹಿರಂಗ ಹರಾಜು ಪ್ರಕಟಣೆ

**ಸಂಖ್ಯೆ:ಉಕೃನಿ/ ರಾಮಸ/ ವಾಹನ/ ವಿಲೇವಾರಿ/ 97-3/ 05-06, ಬೆಂಗಳೂರು, ದಿನಾಂಕ:1ನೇ ಅಕ್ಟೋಬರ್, 2005**

**ವಿಷಯ :** ಉಪ ಕೃಷಿ ನಿರ್ದೇಶಕರು (ರಾಜ್ಯ ಮಣ್ಣು ಸಮೀಕ್ಷೆ) ಕೃಷಿ ನಿರ್ದೇಶನಾಲಯ, ಶೇಷಾದ್ರಿ ರಸ್ತೆ, ಬೆಂಗಳೂರು ಕಛೇರಿಯ ವಾಹನಗಳನ್ನು ರೀಟೆಂಡರ್-ಕಂ-ಬಹಿರಂಗ ಹರಾಜಿನ ಮೂಲಕ ವಿಲೇವಾರಿ ಮಾಡುವ ಬಗ್ಗೆ.

ಈ ಮೂಲಕ ಸಾರ್ವಜನಿಕರಿಗೆ ತಿಳಿಯಪಡಿಸುವುದೇನೆಂದರೆ, ಉಪ ಕೃಷಿ ನಿರ್ದೇಶಕರು, (ರಾಜ್ಯ ಮಣ್ಣು ಸಮೀಕ್ಷೆ) ಕೃಷಿ ಆಯುಕ್ತರ ಕಾರ್ಯಾಲಯ, ಶೇಷಾದ್ರಿ ರಸ್ತೆ, ಬೆಂಗಳೂರು-1, ರವರ ಕಛೇರಿಯ ವಾಹನಗಳನ್ನು ರೀಟೆಂಡರ್-ಕಂ- ಬಹಿರಂಗ ಹರಾಜಿನ ಮೂಲಕ ಸ್ಥಳದಲ್ಲಿ ಯಾವ ರೀತಿ ಇದೆಯೋ ಅದೇ ಸ್ಥಿತಿಯಲ್ಲಿ ವಿಲೇವಾರಿ ಮಾಡಲಾಗುವುದು. ಇಚ್ಛೆಯುಳ್ಳ ಸಾರ್ವಜನಿಕರು ಈ ರೀಟೆಂಡರ್-ಕಂ-ಬಹಿರಂಗ ಹರಾಜಿನಲ್ಲಿ ಭಾಗವಹಿಸಬಹುದು. ವಿವರಗಳು ಕೆಳಕಂಡಂತಿರುತ್ತದೆ.

| ಕ್ರ.ಸಂ. | ವಾಹನ ಸಂಖ್ಯೆ | ಮಾಡಲ್ ವರ್ಷ | ಚಾರ್ಸಿ ಸಂಖ್ಯೆ | ಇಂಜಿನ್ ಸಂಖ್ಯೆ | ಷರಾ |
|---|---|---|---|---|---|
| 1 | 2 | 3 | 4 | 5 | 6 |
| 1. | ಎಂ.ಇ.ಎನ್. 6207 ಮಹೇಂದ್ರ ಜೀಪ್ | 1977 | CJ 500 D 2772658 | 772658 | |
| 2. | ಎಂ.ಇ.ಆರ್. 6218 ಮಹೇಂದ್ರ ಜೀಪ್ | 1979 | CJ 500 D2 DB 05419 | DB 06419 | |
| 3. | ಎಂ.ಇ.ಟಿ. 2145 ಜೀಪ್ ಟ್ರೇಲರ್ | 1977 | - | - | |
| 4. | ಎಂ.ಇ.ಟಿ. 2146 ಜೀಪ್ ಟ್ರೇಲರ್ | 1977 | - | - | |

| ವಿಕ್ರಯದ ಮಾದರಿ | ಟೆಂಡರ್ ಸ್ವೀಕರಿಸುವ ಸ್ಥಳ | ಟೆಂಡರ್ ಸ್ವೀಕರಿಸುವ ಕೊನೆಯ ದಿನಾಂಕ | ಹರಾಜಿನ ದಿನಾಂಕ ಮತ್ತು ವೇಳೆ | ಇ.ಎಂ.ಡಿ. ಠೇವಣಿ ತೆಗೆಯಬೇಕಾದ ಹಣ ಹಾಗೂ ಅಧಿಕಾರಿಯ ಹೆಸರು | ಬಹಿರಂಗ ಹರಾಜು ಮಾಡುವ ಸ್ಥಳ |
|---|---|---|---|---|---|
| 1 | 2 | 3 | 4 | 5 | 6 |
| ಟೆಂಡರ್ ಕಂ-ಬಹಿರಂಗ ಹರಾಜು | ಉಪ ಕೃಷಿ ನಿರ್ದೇಶಕರ ಕಛೇರಿ, (ರಾಜ್ಯ ಮಣ್ಣು ಸಮೀಕ್ಷೆ) ಕೃಷಿ ಆಯುಕ್ತರ ಕಾರ್ಯಾಲಯ, ಶೇಷಾದ್ರಿರಸ್ತೆ, ಬೆಂಗಳೂರು. | 14.11.05 ರಂದು ಮಧ್ಯಾಹ್ನ 12.00 ಗಂಟೆವರೆಗೆ | 14.11.2005 ಅಪರಾಹ್ನ 3.00 ಗಂಟೆಗೆ | ರೂ.5000-00 (ಐದು ಸಾವಿರ) ಕ್ರಾಸ್ ಮಾಡಿದ ಡಿ.ಡಿ. ಉಪ ಕೃಷಿ ನಿರ್ದೇಶಕರು (ರಾಜ್ಯ ಮಣ್ಣು ಸಮೀಕ್ಷೆ) ಬೆಂಗಳೂರು ರವರ ಹೆಸರಿನಲ್ಲಿ) | ಕೃಷಿ ನಿರ್ದೇಶನಾಲಯದ ಆವರಣ, ಶೇಷಾದ್ರಿ ರಸ್ತೆ, ಬೆಂಗಳೂರು-1. |

**ಷರತ್ತುಗಳು:**

1) ವಾಹನಕ್ಕೆ ಟೆಂಡರ್ ಸಲ್ಲಿಸುವವರು ಬಿಳಿಯ ಹಾಳೆಯಲ್ಲಿ ಗರಿಷ್ಟ ಮೊತ್ತವನ್ನು ಅಂಕಿಗಳಲ್ಲಿ ಮತ್ತು ಅಕ್ಷರಗಳಲ್ಲಿ ನಮೂದಿಸಿ ರೂ.5000-00 ಗಳ ಕ್ರಾಸ್ ಮಾಡಿದ ಡಿ.ಡಿ.ಯನ್ನು ಲಗತ್ತಿಸಿ ಮೊಹರು ಮಾಡಿದ ಲಕೋಟೆಯಲ್ಲಿಟ್ಟು ಲಕೋಟೆಯ ಮೇಲೆ ವಾಹನದ ನಂಬರನ್ನು ದಪ್ಪ ಅಕ್ಷರದಲ್ಲಿ ನಮೂದಿಸುವುದು ಮತ್ತು ಟೆಂಡರ್‌ದಾರರ ವಿಳಾಸವನ್ನು ಸ್ಪಷ್ಟವಾಗಿ ಬರೆದು ಸಲ್ಲಿಸಬೇಕು ಡಿ.ಡಿ. ಇಲ್ಲದಿರುವ ಟೆಂಡರನ್ನು ಮಾನ್ಯ ಮಾಡಲಾಗುವುದಿಲ್ಲ.
2) ದಿನಾಂಕ: 14.11.2005ರಂದು ಬಹಿರಂಗ ಹರಾಜು ಪ್ರಕ್ರಿಯೆ ಮುಕ್ತಾಯವಾದ ನಂತರ ಟೆಂಡರ್ ಲಕೋಟೆಗಳನ್ನು ಬಿಡ್‌ದಾರರ ಹಾಗೂ ಟೆಂಡರ್‌ದಾರರ ಸಮ್ಮುಖದಲ್ಲಿ ತೆರೆಯಲಾಗುವುದು. ಆಖೈರು ಬಿಡ್ ಅಥವಾ ಟೆಂಡರ್ ಮೊಬಲಗು ಇವುಗಳಲ್ಲಿ ಗರಿಷ್ಠ ಮೊತ್ತವನ್ನು ಅಂಗೀಕರಿಸಲಾಗುವುದು.
3) ಹರಾಜಿನಲ್ಲಿ ಭಾಗವಹಿಸುವವರು ರೂ.5000-00 (ರೂ. ಐದು ಸಾವಿರ) ಮಾತ್ರ ಠೇವಣಿ ಇಟ್ಟು ಹರಾಜಿನಲ್ಲಿ ಭಾಗವಹಿಸುವುದು.
4) ಟೆಂಡರ್ ಹಾಕಿರುವವರು ಸಹ ಬಹಿರಂಗ ಹರಾಜಿನಲ್ಲಿ ಭಾಗವಹಿಸಲು ಇಚ್ಛಿಸಿದಲ್ಲಿ ರೂ.5000-00 ಠೇವಣಿ ಇಟ್ಟು ಹರಾಜಿನಲ್ಲಿ ಭಾಗವಹಿಸಬಹುದು.
5) ಯಶಸ್ವಿ ಬಿಡ್‌ದಾರರು/ ಟೆಂಡರ್‌ದಾರರು ಠೇವಣಿ ಮೊಬಲಗು ಹೊರತು ಪಡಿಸಿ ಗರಿಷ್ಟ ಬಿಡ್/ ಟೆಂಡರ್ ಮೊತ್ತದ ಶೇ.25ರಷ್ಟು ಮೊಬಲಗು ಸ್ಥಳದಲ್ಲಿಯೇ ಪಾವತಿಸಬೇಕು. ತಪ್ಪಿದ್ದಲ್ಲಿ ಅವರು ನೀಡಿರುವ ಠೇವಣಿ ಹಣವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದು. ಟೆಂಡರ್ ಹರಾಜನ್ನು ಸಂಬಂಧಿಸಿದ ಅಧಿಕಾರಿಯು ಅನುಮೋದಿಸಿದ ನಂತರ ಬಾಕಿ ಮೊತ್ತವನ್ನು ಮತ್ತು ನಿಯಮಾನುಸಾರ ತೆರಿಗೆಯನ್ನು ಈ ಕಛೇರಿಯ ತಿಳುವಳಿಕೆ ಪತ್ರ ಸ್ವೀಕರಿಸಿದ 10 ದಿನದೊಳಗೆ ಪಾವತಿಸಿ ತಮ್ಮ ಸ್ವಂತ ಖರ್ಚಿನಿಂದ ವಾಹನವನ್ನು ತೆಗೆದುಕೊಂಡು ಹೋಗತಕ್ಕದ್ದು ತಪ್ಪಿದ್ದಲ್ಲಿ ಅವರು ಪಾವತಿಸಿದ ಒಟ್ಟು ಮೊತ್ತವನ್ನು ಮುಟ್ಟುಗೋಲು ಹಾಕಿಕೊಳ್ಳಲಾಗುವುದು ಹಾಗೂ ಈ ಬಗ್ಗೆ ಯಾವುದೇ ಹಕ್ಕು ಅವರಿಗೆ ಇರುವುದಿಲ್ಲ.
6) ಯಶಸ್ವಿ ಬಿಡ್: ಟೆಂಡರ್‌ದಾರರು ತಮ್ಮ ಖರ್ಚಿನಲ್ಲಿ ವಾಹನದ ಮಾಲಿಕತ್ವದ ಬದಲಾವಣೆ ಮಾಡಿಕೊಳ್ಳತಕ್ಕದ್ದು.
7) ಯಶಸ್ವಿ ಬಿಡ್: ಟೆಂಡರುದಾರರು ಹೊರತು ಪಡಿಸಿ ಉಳಿದವರಿಗೆ ಠೇವಣಿ ಹಣ: ಡಿ.ಡಿ. ಯನ್ನು ಹರಾಜು ಪ್ರಕ್ರಿಯೆ ಮುಕ್ತಾಯವಾದ ನಂತರ ಅವರಿಂದ ಲಿಖಿತ ಬೇಡಿಕೆ ನೀಡಿದ ತರುವಾಯ ಹಿಂದಿರುಗಿಸಲಾಗುವುದು.
8) ಹರಾಜು ಕೈಗೊಳ್ಳುವ/ ರದ್ದುಪಡಿಸುವ/ ಮುಂದೂಡುವ ಹಾಗೂ ಬಿಡ್ ಅಂಗೀಕರಿಸುವ ಮತ್ತು ತಿರಸ್ಕರಿಸುವ ಹಕ್ಕು ಕಾಯ್ದಿರಿಸಲಾಗಿದೆ.
9) ಎಲ್ಲಾ ವಿಷಯಗಳಲ್ಲಿ ಉಪ ಕೃಷಿ ನಿರ್ದೇಶಕರು, (ರಾಜ್ಯ ಮಣ್ಣು ಸಮೀಕ್ಷೆ) ಶೇಷಾದ್ರಿ ರಸ್ತೆ, ಬೆಂಗಳೂರು ಇವರ ತೀರ್ಮಾನವೇ ಅಂತಿಮವಾಗಿರುತ್ತದೆ. ಈ ತೀರ್ಮಾನಕ್ಕೆ ಎಲ್ಲಾ ಬಿಡ್‌ದಾರರು/ ಟೆಂಡರ್‌ದಾರರು ಬದ್ಧರಾಗಿರಬೇಕಾಗಿರುತ್ತದೆ.
10) ವಾಹನವನ್ನು ಈಗ ಇದ್ದ ಯಥಾ ಸ್ಥಿತಿಯಲ್ಲಿಯೇ ಹರಾಜು ಮಾಡಲಾಗುವುದು. ವಾಹನವನ್ನು ಕಛೇರಿ ಕೆಲಸದ ದಿನಗಳಲ್ಲಿ ಕಛೇರಿ ವೇಳೆಯಲ್ಲಿ ವೀಕ್ಷಿಸಬಹುದು.

ಉಪ ಕೃಷಿ ನಿರ್ದೇಶಕರು,
ರಾಜ್ಯ ಮಣ್ಣು ಸಮೀಕ್ಷೆ, ಬೆಂಗಳೂರು.

ಪಿ.ಆರ್.554

## ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

## ಕಾರ್ಯನಿರ್ವಾಹಕ ಅಭಿಯಂತರರು, ಸಣ್ಣ ನೀರಾವರಿ ವಿಭಾಗ, ಬೀದರ್ ರವರ ಕಛೇರಿ

## ಟೆಂಡರ್ ಪ್ರಕಟಣೆ

## (ಎರಡು ಲಕೋಟೆ ಪದ್ಧತಿ)

**ಸಂಖ್ಯೆ:ಸನೀವಿ:ಬೀದರ್:ತಾಶಾ-3: ಮನ್ನಳ್ಳಿ:ಇಂಗು ಕೆರೆ/ ಟೆಂಡರ್:2005-06/ 2860, ದಿನಾಂಕ:21ನೇ ಸೆಪ್ಟೆಂಬರ್, 2005**

ಕಾಮಗಾರಿಯ ಹೆಸರು : ಬೀದರ್ ಜಿಲ್ಲೆ ಬಸವಕಲ್ಯಾಣ ತಾಲ್ಲೂಕಿನ ಮನ್ನಳ್ಳಿ ಗ್ರಾಮದ ಹತ್ತಿರ ಹೊಸ ಇಂಗು ಕೆರೆ ನಿರ್ಮಾಣ.

ಕರ್ನಾಟಕ ಲೋಕೋಪಯೋಗಿ ಸಂಹಿತೆ ಪಿ.ಡಬ್ಲ್ಯೂ.ಜಿ.65 ಮತ್ತು 66 ಹಾಗೂ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಯಲ್ಲಿ ಪಾರದರ್ಶಕತೆ ಆಕ್ಟ್ 2000 ಮತ್ತು ಅದರ ಇತ್ತೀಚಿನ ತಿದ್ದುಪಡಿಗಳಂತೆ ಕರ್ನಾಟಕ ರಾಜ್ಯದಲ್ಲಿ ಲೋಕೋಪಯೋಗಿ ಇಲಾಖೆಯಲ್ಲಿ ಹಾಲಿ ನೊಂದಾಯಿಸಿರುವ ಪ್ರಥಮ ದರ್ಜೆ (ಸಿವಿಲ್) ಗುತ್ತಿಗೆದಾರರಿಂದ ಈ ಕೆಳಗೆ ನಮೂದಿಸಿದ ಕಾಮಗಾರಿಗಾಗಿ ಐಟಂ ರೇಟ್ ಟೆಂಡರ್‌ಗಳು ಎರಡು ಲಕೋಟೆ ಪದ್ಧತಿಯಂತೆ ದ್ವಿಪ್ರತಿಯಲ್ಲಿ ಸಲ್ಲಿಸಲು ಕರೆಯಲಾಗಿವೆ. ಎರಡು ಲಕೋಟೆಗಳಲ್ಲಿ ಒಂದು "ತಾಂತ್ರಿಕ ಬಿಡ್" ಎರಡನೆಯದು "ಆರ್ಥಿಕ ಬಿಡ್" ಆಗಿರುತ್ತದೆ. ತಾಂತ್ರಿಕ ಬಿಡ್ಡನ್ನು ಪ್ರಥಮ ಹಂತದಲ್ಲಿ ತೆರೆಯಲಾಗುವುದು ಮತ್ತು ತದನಂತರ ಕೇವಲ ತಾಂತ್ರಿಕ ಬಿಡ್‌ನಲ್ಲಿ ಅರ್ಹತೆ ಪಡೆದ ಗುತ್ತಿಗೆದಾರರ "ಆರ್ಥಿಕ ಬಿಡ್ಡನ್ನು" ತೆರೆದು ವಿಶ್ಲೇಷಿಸಲಾಗುವುದು.

ಕಾಮಗಾರಿಯ ಖಾಲಿ ಟೆಂಡರ್ ಪುಸ್ತಕಗಳನ್ನು ಪಡೆಯಲು ಅರ್ಹ ಗುತ್ತಿಗೆದಾರರು ಅರ್ಜಿಯನ್ನು ಕಾರ್ಯನಿರ್ವಾಹಕ ಅಭಿಯಂತರರು, ಸಣ್ಣ ನೀರಾವರಿ ವಿಭಾಗ ಕಛೇರಿ, (ಪ್ರತಾಪ ನಗರ) ನೌಬಾದ, ಬೀದರ್‌ನಲ್ಲಿ ಟೆಂಡರ್ ಪುಸ್ತಕಗಳ ಬೆಲೆಯೊಂದಿಗೆ (ಹಿಂತಿರುಗಿಸಲಾರದ) ಸಲ್ಲಿಸುವುದು. ಗುತ್ತಿಗೆದಾರರಿಗೆ ಖಾಲಿ ಟೆಂಡರ್ ಪುಸ್ತಕಗಳನ್ನು ಕಾರ್ಯನಿರ್ವಾಹಕ ಅಭಿಯಂತರರು, ಸಣ್ಣ ನೀರಾವರಿ ವಿಭಾಗ, ಬೀದರ್ ರವರ ಕಛೇರಿಯಲ್ಲಿಯೇ ನಿಗದಿತ ದಿನಾಂಕ ಮತ್ತು ವೇಳೆಯಲ್ಲಿ ನೀಡಲಾಗುವುದು.

ಭರ್ತಿ ಮಾಡಿದ ಮೊಹರು ಬಂದ ಟೆಂಡರುಗಳನ್ನು ಏಕ ಕಾಲದಲ್ಲಿ ಸದರಿ ಕಾಮಗಾರಿಗಾಗಿ ಇರಿಸಿದ ಮೊಹರ ಬಂದ ಟೆಂಡರ್ ಪೆಟ್ಟಿಗೆಗಳಲ್ಲಿ (1) ಕಾರ್ಯನಿರ್ವಾಹಕ ಅಭಿಯಂತರರು, ಸಣ್ಣ ನೀರಾವರಿ ವಿಭಾಗ, ಬೀದರ್ (ಪ್ರತಾಪನಗರ, ನೌಬಾದ ಬೀದರ್) (2) ಮುಖ್ಯ ಇಂಜಿನೀಯರ್, ಸಣ್ಣ ನೀರಾವರಿ (ಉತ್ತರ) ವಲಯ, ಬಿಜಾಪುರ ಮತ್ತು (3) ಅಧೀಕ್ಷಕ ಅಭಿಯಂತರರು, ಸಣ್ಣ ನೀರಾವರಿ ವೃತ್ತ, ಐವಾನ-ಇ-ಶಾಹಿ, ಗುಲಬರ್ಗಾ ರವರ ಕಛೇರಿಗಳಲ್ಲಿ ಸ್ವೀಕರಿಸಲಾಗುವುದು.

ಕಾಮಗಾರಿಯ ತಾಂತ್ರಿಕ ಬಿಡ್‌ಗಳನ್ನು ಕಾರ್ಯನಿರ್ವಾಹಕ ಅಭಿಯಂತರರು, ಸಣ್ಣ ನೀರಾವರಿ ವಿಭಾಗ, ಬೀದರ್ ಇವರ ಕಛೇರಿಯಲ್ಲಿ ಕಾರ್ಯನಿರ್ವಾಹಕ ಅಭಿಯಂತರರು ಹಾಜರಿದ್ದ ಗುತ್ತಿಗೆದಾರರ ಅಥವಾ ಅವರ ಪರವಾಗಿ ಹಾಜರಿದ್ದ ಪ್ರತಿನಿಧಿಗಳ ಉಪಸ್ಥಿತಿಯಲ್ಲಿ ತೆರೆಯುವರು. ತಾಂತ್ರಿಕ ಬಿಡ್‌ನಲ್ಲಿ ಅರ್ಹರಾದ ಗುತ್ತಿಗೆದಾರರ ಹೆಸರುಗಳನ್ನು ಕಛೇರಿಯ ಸೂಚನಾ ಫಲಕದಲ್ಲಿ ಪ್ರಕಟಿಸಲಾಗುವುದು.

| | | | |
|---|---|---|---|
| 1. | ಕಾಮಗಾರಿಯ ಹೆಸರು | : | ಬೀದರ್ ಜಿಲ್ಲೆ, ಬಸವಕಲ್ಯಾಣ ತಾಲ್ಲೂಕಿನ ಮನ್ನಳ್ಳಿ ಗ್ರಾಮದ ಹತ್ತಿರ ಹೊಸ ಇಂಗು ಕೆರೆ ನಿರ್ಮಾಣ |
| 2. | ಟೆಂಡರಿಗೆ ಅಳವಡಿಸಿದ ಕಾಮಗಾರಿಯ ಅಂದಾಜು ಮೊತ್ತ | : | ರೂ.103.00 ಲಕ್ಷ |
| 3. | ಇ.ಎಂ.ಡಿ. (ಭದ್ರತಾ ಠೇವಣಿ) (ಟೆಂಡರ್ ತೆರೆಯುವ ದಿನಾಂಕದಿಂದ 180 ದಿನಗಳ ವರೆಗೆ ಚಾಲ್ತಿಯಲ್ಲಿರಬೇಕು) | : | ರೂ. 1,03,000.00 |
| 4. | ಖಾಲಿ ಟೆಂಡರ್ ಪುಸ್ತಕಗಳ ಬೆಲೆ (ಯಾವುದೇ ಸಂದರ್ಭದಲ್ಲಿ ಹಿಂತಿರುಗಿಸಲಾಗುವುದಿಲ್ಲಾ) | : | ರೂ. 10,000.00 +ತೆರಿಗೆ. |
| 5. | ಕಾಮಗಾರಿಯನ್ನು ಪೂರ್ಣಗೊಳಿಸಲು ಕಾಲಾವಕಾಶ | : | 9 ತಿಂಗಳು (ಮಳೆಗಾಲ ಹೊರತುಪಡಿಸಿ) |
| 6. | ಖಾಲಿ ಟೆಂಡರ್ ಪುಸ್ತಕಗಳನ್ನು ಪಡೆಯಲು ಅರ್ಜಿ ಸಲ್ಲಿಸಲು ಕೊನೆಯ ದಿನಾಂಕ. ಕಛೇರಿ ವೇಳೆಯಲ್ಲಿ 5.30 ಗಂಟೆಯವರೆಗೆ | : | 28.10.2005. |
| 7. | ಗುತ್ತಿಗೆದಾರರಿಗೆ ಖಾಲಿ ಟೆಂಡರ್ ಪುಸ್ತಕಗಳನ್ನು ನೀಡುವ ದಿನಾಂಕ ಕಛೇರಿ ವೇಳೆಯಲ್ಲಿ 5.30 ಗಂಟೆಯವರೆಗೆ | : | 09.11.2005 ಮತ್ತು 10.11.2005. |
| 8. | ಭರ್ತಿ ಮಾಡಿದ ಮೊಹರು ಬಂದ ಟೆಂಡರ್‌ಗಳನ್ನು ಸ್ವೀಕರಿಸುವ ದಿನಾಂಕ (ತಾಂತ್ರಿಕ ಬಿಡ್ ಲಕೋಟೆ, ಆರ್ಥಿಕ ಬಿಡ್ ಲಕೋಟೆ ಪ್ರತ್ಯೇಕ) | : | 17.11.2005 4.00 ಗಂಟೆಯವರೆಗೆ |
| 9. | ತಾಂತ್ರಿಕ ಬಿಡ್‌ನ್ನು ತೆರೆಯುವ ದಿನಾಂಕ (ಸಾಧ್ಯವಾದಲ್ಲಿ) | : | 18.11.2005 4.00 ಗಂಟೆಗೆ |
| 10. | ಅರ್ಹ ಗುತ್ತಿಗೆದಾರರ ಆರ್ಥಿಕ ಬಿಡ್‌ನ್ನು ತೆರೆಯುವ ದಿನಾಂಕ | : | ತದನಂತರ ತಿಳಿಸಲಾಗುವುದು. |

**ಷರತ್ತುಗಳು:**

1) ಟೆಂಡರ್ ಖಾಲಿ ಪುಸ್ತಕಗಳನ್ನು ಪಡೆಯಲು ಇಚ್ಛಿಸಿರುವ ಗುತ್ತಿಗೆದಾರರು ಅರ್ಜಿಯ ಜೊತೆಯಲ್ಲಿ ಖಾಲಿ ಟೆಂಡರ್ ಪುಸ್ತಕಗಳ (ಹಿಂತಿರುಗಿಸಲಾಗದ) ಬೆಲೆಯನ್ನು, ಗುತ್ತಿಗೆದಾರರು ನೊಂದಾಯಿಸಿರುವ ಪ್ರಮಾಣ ಪತ್ರದ ಪ್ರತಿಯನ್ನು ಮತ್ತು ಇತ್ತೀಚಿನ ಸೇಲ್ಸ್ ಟ್ಯಾಕ್ಸ್ ಮತ್ತು ಇನ್‌ಕಂ ಟ್ಯಾಕ್ಸ್ ಕ್ಲಿಯರೆನ್ಸ್ ದಸ್ತಾವೇಜುಗಳ ಪ್ರತಿಗಳನ್ನು ಕಾರ್ಯನಿರ್ವಾಹಕ ಅಭಿಯಂತರರು, ಸಣ್ಣ ನೀರಾವರಿ ವಿಭಾಗ, ಬೀದರ್ ರವರಿಗೆ ಸಲ್ಲಿಸುವುದು.

2) ಅಗತ್ಯ ಇ.ಎಂ.ಡಿ. (ಭದ್ರತಾ ಠೇವಣಿ) ಯನ್ನು ರಾಷ್ಟ್ರೀಕೃತ ಬ್ಯಾಂಕುಗಳ ಡಿ.ಡಿ./ ಎಫ್.ಡಿ.ಆರ್/ ಬ್ಯಾಂಕರ್ಸ್ ಚೆಕ್/ ಟಿ.ಡಿ.ಆರ್. ರೂಪದಲ್ಲಿ ಅಥವಾ ಪ್ಲಡ್ಜ್ ಮಾಡಿದ ಎನ್.ಎಸ್.ಸಿ. ರೂಪದಲ್ಲಿ ಕಾರ್ಯನಿರ್ವಾಹಕ ಅಭಿಯಂತರರು, ಸಣ್ಣ ನೀರಾವರಿ ವಿಭಾಗ, ಬೀದರ್ ರವರ ಹೆಸರಿನಲ್ಲಿ ಪಡೆದು ಖಾಲಿ ಟೆಂಡರ್ ಪುಸ್ತಕಗಳಿಗಾಗಿ ಸಲ್ಲಿಸುವ ಅರ್ಜಿ ಜೊತೆಯಲ್ಲಿ ಸಲ್ಲಿಸುವುದು.

3) ಟೆಂಡರಿನಲ್ಲಿ ಅನರ್ಹರಾದ ಗುತ್ತಿಗೆದಾರರ ಇ.ಎಂ.ಡಿ. (ಭದ್ರತಾ ಠೇವಣಿ) ಯನ್ನು ಟೆಂಡರುಗಳು ತೆರೆದ 90 (ತೊಂಬತ್ತು) ದಿನಗಳ ನಂತರವೆ ಹಿಂತಿರುಗಿಸಲಾಗುವುದು.

4) ಟೆಂಡರಿನ ತಾಂತ್ರಿಕ ಬಿಡ್ ಜೊತೆಯಲ್ಲಿ ಸಲ್ಲಿಸಿರುವ ಎಲ್ಲಾ ದಾಖಲೆಗಳು ನೋಟರಿ ಅಥವಾ ಗೆಜೆಟೆಡ್ ಅಧಿಕಾರಿಗಳಿಂದ ಮೇಲ್ ರುಜು ಮಾಡಿರಬೇಕು. ಮೂಲ ದಾಖಲಾತಿಗಳನ್ನು ಪರಿಶೀಲನೆಗಾಗಿ ಟೆಂಡರಿನ ತಾಂತ್ರಿಕ ಬಿಡ್ ತೆರೆಯುವ ದಿನಾಂಕದಂದು ಅಥವಾ ನಿಗದಿತ ದಿನಾಂಕದಂದು ಗುತ್ತಿಗೆದಾರರು ಕಛೇರಿಗೆ ಹಾಜರುಪಡಿಸಬೇಕು. ಇಲ್ಲದಿದ್ದಲ್ಲಿ ಅಂತಹ ಟೆಂಡರ್ ತಿರಸ್ಕರಿಸಲಾಗುವುದು.

5) ಷರತ್ತಿನ ಟೆಂಡರುಗಳನ್ನು ಪರಿಗಣಿಸಲಾಗುವುದಿಲ್ಲಾ.

6) ಖಾಲಿ ಟೆಂಡರ್ ಪುಸ್ತಕಗಳಿಗಾಗಿ ಅರ್ಜಿ ಸಲ್ಲಿಸುವ ಗುತ್ತಿಗೆದಾರರು ಈ ಕೆಳಕಂಡ ಅರ್ಹತೆ ಹೊಂದಿರಬೇಕು.

   i) 2005-06ರ ಸಾಲಿನಿಂದ 5 ವರ್ಷದೊಳಗೆ ಹಿಂದಕ್ಕೆ ಇಂತಹದೇ ಒಂದು ಕಾಮಗಾರಿಯನ್ನು ಟೆಂಡರ್ ಅವಧಿಯೊಳಗೆ ಪೂರ್ಣಗೊಳಿಸಿರಬೇಕು. ಪೂರ್ತಿಗೊಳಿಸಿದ ಬಗ್ಗೆ ಸಂಬಂಧಪಟ್ಟ ಪ್ರಾಧಿಕಾರದಿಂದ ದೃಡೀಕರಣ ಪತ್ರ ಸಲ್ಲಿಸುವುದು. ವರ್ಷ 2005-06ನೇ ಸಾಲಿನ ದರಗಳ ಮಟ್ಟಕ್ಕೆ ಹೋಲಿಸಿದಾಗ ಕನಿಷ್ಟ ರೂ.206.00 ಲಕ್ಷಗಳ (ಎರಡು ನೂರಾ ಆರು ಲಕ್ಷ ಮಾತ್ರ) ಆರ್ಥಿಕ ವಹಿವಾಟು ಎರಡು ಆರ್ಥಿಕ ವರ್ಷಗಳಲ್ಲಿ ಮಾಡಿರಬೇಕು. ವರ್ಷ 2005-06ನೇ ಸಾಲಿನ ಆರ್ಥಿಕ ವಹಿವಾಟಿಗೆ ಹೋಲಿಸಿದಾಗ ಪ್ರತಿವರ್ಷಕ್ಕೆ ಶೇಕಡಾ 10ರ ಹೆಚ್ಚಿನ ರಿಯಾಯಿತಿಯನ್ನು ಪರಿಗಣಿಸಲಾಗುವುದು.

   ii) ಪ್ರಮುಖ ಗುತ್ತಿಗೆದಾರರೆಂದು ಕನಿಷ್ಠ ಇಂತಹದೆ ಒಂದು ಕಾಮಗಾರಿ (ಶೇಕಡ 90 ರಷ್ಟು ಗುತ್ತಿಗೆ ಮೊತ್ತಕ್ಕಿಂತ ಕಡಿಮೆ ಇಲ್ಲದಂತೆ ಎಂದರೆ 92.70 ಲಕ್ಷ) ತೃಪ್ತಿಕರವಾಗಿ (ಪ್ರಮುಖ ಅಂಶಗಳಾದ ಅಗೆತ, ಮಣ್ಣಿನ ಒಡ್ಡು ಮತ್ತು ಕಾಂಕ್ರೀಟ್ ಕೆಲಸಗಳನ್ನು ವರ್ಷ 2005-06ನೇ ಸಾಲಿನ ದರಗಳ ಮಟ್ಟಕ್ಕೆ)

iii) ಯಾವುದೇ ಒಂದು ವರ್ಷದಲ್ಲಿ ಈ ಕೆಳಕಾಣಿಸಿದ ಕನಿಷ್ಠ ಪರಿಮಾಣದ ಕೆಲಸಗಳನ್ನು ಮಾಡಿರಬೇಕು.

ಅ) ಅಗೆತದ ಕೆಲಸ : 16000 ಘ.ಮೀ.

ಆ) ಮಣ್ಣಿನ ಒಡ್ಡು : 47505 ಘ.ಮೀ.

ಇ) ಸಿಮೆಂಟ್ ಕಾಂಕ್ರೀಟ್ : 605 ಘ.ಮೀ.

7) ಅರ್ಜಿದಾರರು ಪ್ರದರ್ಶಿಸುವುದು.

i) ಮುಖ್ಯವಾಗಿ ಹಾಗೂ ಮಹತ್ವದಾಗಿರುವ ಈ ಕೆಳಕಂಡ ಯಂತ್ರೋಪಕರಣಗಳನ್ನು (ಸ್ವಂತ ಅಥವಾ ಲೀಜ್ ಮೇಲೆ) ಹೊಂದಿರಬೇಕು. ಲೀಜ್ ಆಗಿದ್ದಲ್ಲಿ ಜಿ.ಪಿ.ಎ. ಮೂಲ ದಾಖಲಾತಿ ಒದಗಿಸುವುದು.

1. ಎಕ್ಸ್‌ಕವೇಟರ್/ ಪೋಕ್ಲೆನ್ : 2 ನಂ.
2. ಲಾರಿಗಳು/ ಟಿಪ್ಪರ್‌ಗಳು : 10 ನಂ.
3. ರೋಡ್ ರೋಲರ್ : 2 ನಂ.
4. ಕಾಂಕ್ರೀಟ್ ಮಿಕ್ಸರ್ : 2 ನಂ.
5. ನೀರು ಎತ್ತುವ ಪಂಪುಗಳು : 2 ನಂ.

ii) ಈ ಯೋಜನೆಗೆ 5 ವರ್ಷಗಳ ಸಿವಿಲ್ ಇಂಜಿನಿಯರಿಂಗ್ ಕಾಮಗಾರಿಯ ಇಂತಹದೆ ಅನುಭವವುಳ್ಳ ಒಬ್ಬ ಮ್ಯಾನೇಜರ್ ಹಾಗೂ ಸಾಕಷ್ಟು ಅನುಭವವುಳ್ಳ ಈ ತರಹದ ಕೆಲಸ ಮಾಡಿರುವ ಪರಿಣಿತರು ಹೊಂದಿರಬೇಕು.

iii) ಋಣ ವಿಮೋಚಿಸುವ ಸಾಲ ಸೌಲಭ್ಯಕ್ಕಾಗಿ ರೂ. 50.00 ಲಕ್ಷಕ್ಕೂ ಕಡಿಮೆ ಇಲ್ಲದ ಸಾಲ ಕಾಮಗಾರಿಗಾಗಿ ಪೂರೈಸುವಲ್ಲಿ ಬ್ಯಾಂಕಿನಿಂದ ಸಹಾಯ ಒದಗಿಸುವಂತಿರಬೇಕು.

8) ಗುತ್ತಿಗೆದಾರರು ಕಾಮಗಾರಿಗೆ ಪೂರೈಸಲು ಸಾಕಷ್ಟು ಮಾನವ ಶಕ್ತಿ ಹೊಂದಿರಬೇಕು.

9) ಗುತ್ತಿಗೆದಾರರು ಕಾಮಗಾರಿಗೆ ಬೇಕಾಗುವ ಐ.ಎಸ್. ಗುಣಮಟ್ಟವುಳ್ಳ ಉಕ್ಕು ಮತ್ತು ಸಿಮೆಂಟನ್ನು ತಮ್ಮ ಸ್ವಂತ ಖರ್ಚಿನಿಂದಲೇ ಉಪಯೋಗಿಸುವುದು.

10) ತಾಂತ್ರಿಕ ಬಿಡ್‌ನಲ್ಲಿ ತಿಳಿಸಲಾದ ಎಲ್ಲಾ ವಿವರಗಳಿಗೆ ಸೂಕ್ತ ಪ್ರಾಧಿಕಾರದಿಂದ ಪಡೆದಿರುವ ಪ್ರಮಾಣ ಪತ್ರಗಳ ಸ್ವತಃ ದೃಢೀಕರಿಸಿದ ಪ್ರತಿಗಳು ಬಿಡ್ ಜೊತೆಗೆ ಸಲ್ಲಿಸುವುದು ಹಾಗೂ ಅಗತ್ಯ ಕಂಡು ಬಂದಲ್ಲಿ ಮೂಲ ಪ್ರತಿಗಳನ್ನು ಸಾದರ ಪಡಿಸುವುದು.

11) ಅಂಚೆಯ ಮೂಲಕ ಖಾಲಿ ಟೆಂಡರ್ ಪುಸ್ತಕಗಳನ್ನು ನೀಡಲಾಗುವುದಿಲ್ಲ.

12) ಯಾವುದೇ ಕಾರಣ ನೀಡದೆ ಯಾವುದೇ ಅಥವಾ ಎಲ್ಲಾ ಟೆಂಡರುಗಳನ್ನು ತಿರಸ್ಕರಿಸುವ ಹಕ್ಕು ಕಾಯ್ದಿರಿಸಲಾಗಿದೆ.

13) ಗುತ್ತಿಗೆದಾರರು ಖಾಲಿ ಟೆಂಡರ್ ಪುಸ್ತಕಗಳನ್ನು ಪಡೆಯಲು ತಮ್ಮ ಮೂಲ ನೋಂದಣಿ ಪುಸ್ತಕವನ್ನು ತರುವುದು.

14) ಸದರಿ ಕಾಮಗಾರಿಯ ಬಗ್ಗೆ ಏನಾದರೂ ಮಾಹಿತಿ ಪಡೆಯಬೇಕಾದರೆ, ಕಛೇರಿಯ ವೇಳೆಯಲ್ಲಿ ಕಾರ್ಯನಿರ್ವಾಹಕ ಅಭಿಯಂತರರು, ಸಣ್ಣ ನೀರಾವರಿ ವಿಭಾಗ, ಬೀದರ್ ರವರ ಕಛೇರಿಯಿಂದ ಪಡೆಯಬಹುದು. ಕಛೇರಿ ದೂರವಾಣಿ ಸಂಖ್ಯೆ: 08482-232080.

15) ಸದರಿ ಟೆಂಡರ್ ಘಟನಾವಳಿಗಳಿಗೆ ಅಳವಡಿಸಿದ ದಿನಾಂಕಗಳಲ್ಲಿ ಯಾವುದಾದರೂ ಸಾರ್ವತ್ರಿಕ ರಜೆ ಎಂದು ಘೋಷಿತವಾದಲ್ಲಿ ಆ ದಿನಾಂಕದ ಮರು ದಿನಾಂಕವನ್ನು ಟೆಂಡರ್‌ಗಳಿಗಾಗಿ ಪರಿಗಣಿಸುವುದು.

**ಶ್ಯಾಮರಾವ ಕುಲಕರ್ಣಿ**

ಪಿ.ಆರ್.555

ಕಾರ್ಯನಿರ್ವಾಹಕ ಅಭಿಯಂತರರು, ಸಣ್ಣ ನೀರಾವರಿ ವಿಭಾಗ, ಬೀದರ್, ದೂರವಾಣಿ ಸಂಖ್ಯೆ: 08482-232080

## ಲೋಕೋಪಯೋಗಿ ಇಲಾಖೆ

## ಕಾರ್ಯಪಾಲಕ ಇಂಜಿನಿಯರ್‌ರವರ ಕಾರ್ಯಾಲಯ, ಲೋಕೋಪಯೋಗಿ ಇಲಾಖೆ ವಿಭಾಗ, ದಾವಣಗೆರೆ

## ಟೆಂಡರ್ ಮುಂದೂಡಿಕೆ

**ಸಂಖ್ಯೆ:ಕಾಅ/ ದಾವಿದಾ/ ಎಇ-2 ಅಪೆಂಡಿಕ್ಸ್ 'ಇ'/ 1349/ 05-06, ಬೆಂಗಳೂರು, ದಿನಾಂಕ:9ನೇ ಸೆಪ್ಟೆಂಬರ್, 2005**

**ವಿಷಯ :** 2005-06ನೇ ಸಾಲಿನ ಅಪೆಂಡಿಕ್ಸ್ 'ಇ' ಕಾಮಗಾರಿಗಳ ಬಗ್ಗೆ.

**ಉಲ್ಲೇಖ:** 1. ಈ ಕಛೇರಿ ಪತ್ರ ಸಂಖ್ಯೆ: ಕಾಅ/ ದಾವಿದಾ/ ತಾಂ.ಶಾ./ ಅಪೆಂಡಿಕ್ಸ್ 'ಇ'/ 771/2005-06, ದಿನಾಂಕ: 12.07.2005.

2. ಈ ಕಛೇರಿ ಅವಧಿ ವಿಸ್ತರಣೆ ಪತ್ರ ಸಂಖ್ಯೆ:ಕಾಅ/ದಾವಿದಾ/ತಾಂ.ಶಾ./ಅಪೆಂಡಿಕ್ಸ್ 'ಇ'/1115/ 2005-06 ದಿನಾಂಕ: 12.08.2005.

3. -ಅದೇ- ನಂ.1225, ದಿನಾಂಕ: 26.08.2005.

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಉಲ್ಲೇಖ 1ರಲ್ಲಿ ಹೊರಡಿಸಲಾದ ಅಲ್ಪಾವಧಿ ಟೆಂಡರ್ ಪ್ರಕಟಣೆಯಲ್ಲಿನ ಕ್ರ.ಸಂ. 1, 2 ಮತ್ತು 8ರಲ್ಲಿನ ಈ ಕೆಳಕಂಡ ಕಾಮಗಾರಿಗಳ ಷೆಡ್ಯೂಲ್ ವಿತರಿಸುವ ಮತ್ತು ಸ್ವೀಕರಿಸುವ ದಿನಾಂಕವನ್ನು ಅನಿವಾರ್ಯ ಕಾರಣಗಳಿಂದ ಅನಿರ್ದಿಷ್ಟ ಅವಧಿಗೆ ಮುಂದೂಡಲಾಗಿದೆ.

1. ದಾವಣಗೆರೆ ತಾ:ಅಣಜಿ-ಕಿತ್ತೂರು-ಕುರುಡಿ ರಸ್ತೆ ಸರಪಳಿ 0.00 ರಿಂದ 7.70 ಕಿ.ಮೀ. ಆಯ್ದ ಭಾಗಗಳಲ್ಲಿ ಅಭಿವೃದ್ಧಿ ಮತ್ತು ಡಾಂಬರೀಕರಣ.
2. ದಾವಣಗೆರೆ ತಾ:ದಾವಣಗೆರೆ-ಮಲೆಬೆನ್ನೂರು ರಸ್ತೆ ಸರಪಳಿ 0.00 ರಿಂದ 7.70 ಕಿ.ಮೀ. ಆಯ್ದ ಭಾಗಗಳಲ್ಲಿ ಅಭಿವೃದ್ಧಿ ಮತ್ತು ಡಾಂಬರೀಕರಣ.
3. ಹರಪನಹಳ್ಳಿ ತಾ:ಹರಪನಹಳ್ಳಿ-ಹೊಳಲು ರಸ್ತೆ ಮಾರ್ಗ ಹುಲೀಕಟ್ಟೆ ರಸ್ತೆಯ ಆಯ್ದ ಭಾಗಗಳಲ್ಲಿ ಅಭಿವೃದ್ಧಿ ಮತ್ತು ಡಾಂಬರೀಕರಣ.

ಕಾರ್ಯಪಾಲಕ ಇಂಜಿನಿಯರ್,

ಪಿ.ಆರ್.556

ಲೋಕೋಪಯೋಗಿ ಇಲಾಖೆ ವಿಭಾಗ, ದಾವಣಗೆರೆ.

**WATER RESOURCE (MINOR IRRIGATION) DEPARTMENT**
**OFFICE OF THE EXECUTIVE ENGINEER, MINOR IRRIGATION DIVISION, BELLARY**
**TENDER NOTIFICATION (TWO COVER SYSTEM)**
**No. EE/MID/ BLY/A.E.-1/Tender/ 2005-06/1606, Dated: 26th September, 2005**

Sealed item rate tenders in duplicate as per PWG 65 and 66 for the work noted below is invited by the undersigned under "two cover bid system" as per the Karnataka transparency in public procurement act 2000 and as per its latest amendment from the Class-I contractors registered in KPWD, on behalf of the Governor of Karnataka State.

The two cover system consist of "Technical bid" and "Financial bid". The technical bids will be opened first and the financial bids of only those bidders who qualify in the technical bids will be opened on the later stage.

The completed sealed tenders in two cover superscribing "Technical bid" and "Financial bid" will be received simultaneously at the office of the

(1) Executive Engineer, M.I. Division, Contonment, Bellary-4.
(2) Superintending Engineer, M.I. Circle, Iwan Shahi Road, Gulbarga.
(3) Chief Engineer, M.I. (N) zone, Bijapur in the sealed tender boxes.

The technical bid will be opened by the undersigned in the office of the Executive Engineer, M.I. Division, Contonment, Bellary. The list of qualified bidders will be notified on the notice board of the M.I. Division, Bellary after obtaining the approval from the competent authority. The decision of the competent authority is final and binding in this regard.

1. Details of the work put to tender:

| Sl. No. | Name of the work | Amount put to tender Rs. in lakhs | EMD in Rs. in lakhs | Cost of blank tender (non refundable) | Time limit per completion of the work (including mansoon) |
|---|---|---|---|---|---|
| 1. | Construction of LIS Ankasamudra (Venkavadhoothara Matha) in H.B. Halli Taluk Bellary Dist. | 324.00 | 3.24 | 16500.00 | 18 months |

| | | | |
|---|---|---|---|
| 1. | Last date for the receipt of Application for blank tenderforms Up to 5.30 PM | : | 15.10.2005. |
| 2. | Date of issue of blank tender forms Up to 5.30 PM | : | 24.11.2005 & 25.11.2005 |
| 3. | Date of receipt of filled tenders (Financial bid & Technical bids to be submitted separately) upto 4.00 PM | : | 08.12.2005 |
| 4. | Date of opening of technical bids (if possible) at 3.30 PM | : | 09.12.2005 |
| 5. | Date of opening of financial bids | : | will be intimated later on. |

**Conditions:**

1. The application for the purchase of blank tender forms should be submitted to the Executive Engineer, M.I.Division, Contonment, Bellary along with non refundable cost of blank tender forms in the form of DD/Bankers cheque along with copy of contractor registration certificate, latest income tax and sales tax clearance certificate.

2. The earnest money deposit (EMD) shall be in the form of DD/FDR/ Bankers cheque drawn on any nationalised bank or NSC pledged in favour of the Executive Engineer, M.I. Division, Bellary and shall be enclosed with the application for the purchase of blank tender schedule under no circumstance Bank guarantee will not be considered. The EMD shall have a validity of 180 days from the receipt of application.

3. The EMD of unsuccessful bidders wil be refund only after 90 days from the date of opening of the tenders.

4. All the documents enclosed in support of technical bid shall be attested by the notary or Gazetted officer. The original documents shall be produced for the verification on the day of opening technical bids or on the specified date or otherwise tenders will be disqualified.

5. Conditional tenders will not be considered.

6. The applicant satisfying below mentioned qualifying conditions need only apply.

(i) In the last 5 years recon back beginning from the year 2005-06.

(a) Should have achieved in at least 2 financial years a minimum annual financial turn over of not less than Rs.648.00 lakhs at 2005-06 price level (in all classes of Civil Engineering works) Financial turn over will be given weightage of 10% per year based on the reference value bring then to 2005-06.

(b) As a prime contractor should have satisfactorily completed one similar work of value not less than Rs. 292.00 lakhs (at 2005-06 price level) within stipulated time.

(c) Should have executed the following minimum quantities of works in any one year.

| | |
|---|---|
| 1) Excavation | : 2000 Cum |
| 2) Cement Concrete work | : 350 Cum |
| 3) Supply and fixing of pipe for the rising main work | : 3000 Mtr PSC pipeline work. |

1) The contractor has to procure steel, cement etc., required for the works confirming to IS standards at his own cost.

2) The contractor should posses the following required for the work.

(i) Liquid assets/ availability of credit facilities of not less than Rs.260.00 lakhs for the work credit lines/ letter of credit certified from the Banks for meeting the funds requirements etc.,

(ii) The Contractor should have sufficient qualified skilled personnel and "Man Power" for executing the work.

(iii) Availability (either owned or leased) the following key-equipment require for the work.

| | |
|---|---|
| (a) Tipper | - 1 No. |
| (b) Excavators | - 1 No. |
| (c) Concrete mixer | - 2 Nos. |
| (d) Pumpsets | - 10 HP 2 Nos, 5 HP 2Nos. |
| (e) Equipment required for handling and jointing pipes for the raising main work | |
| (i) Chain pulley block | - 5 tonnes 4 Nos. |
| (ii) Hydraulic Jack / turper | - 4 Nos. |

3) The blank tender forms will not be sent by post.

4) The Contractor should produce original registration certificate & pass book while receiving the blank tender forms.

5) Any other information in this connection may be obtained from the office of the undersigned during office hours.

6) The right to accept or reject any or all the tenders without assigning reasons as what so ever is reserved.

**K. KALEEM AHAMED**
PR-557 Executive Engineer,
M.I. Division, Bellary.

**ಉಪ ಅರಣ್ಯ ಸಂರಕ್ಷಣಾಧಿಕಾರಿಗಳ ಕಛೇರಿ, ಕಾವೇರಿ ವನ್ಯ ಜೀವಿ ವಿಭಾಗ, ಕನಕಪುರ**

**ಸಂಕ್ಷಿಪ್ತ ಟೆಂಡರ್ ಅಧಿಸೂಚನೆ**

**ಸಂಖ್ಯೆ:ಎ2/ ಬಿಯುಡಿ/ ಸಿಆರ್-60/ 2005-06, ದಿನಾಂಕ:5ನೇ ಅಕ್ಟೋಬರ್, 2005**

**ವಿಷಯ :** ಕಾವೇರಿ ವನ್ಯ ಜೀವಿ ವಿಭಾಗದ ವ್ಯಾಪ್ತಿಯಲ್ಲಿ ಬರುವ ಕೌದಳ್ಳಿ ವನ್ಯಜೀವಿ ವಲಯದ ಬೆಂಬಲ ಸಿಬ್ಬಂದಿ ವರ್ಗದವರ ಜೋಡಿ ವಸತಿ ಗೃಹ ನಿರ್ಮಾಣ ಕಾಮಗಾರಿ ಕೈಗೊಳ್ಳಲು ಟೆಂಡರ್ ಕರೆಯುವ ಬಗ್ಗೆ.

